ನವೋದಯ ಪ್ರಚಾರ ಪುಸ್ತಕಮಾಲೆ—೨೧

# ಸಾಂತ್ಯಾರು ವೆಂಕಟರಾಜ

ಗುಂಡ್ಮಿ, ಚಂದ್ರಶೇಖರ ಐತಾಳ.



ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
ಉಡುಪಿ 2

ನವೋದಯ ಪ್ರಚಾರ ಪುಸ್ತಕ ಮಾಲೆ—೨೧

# ಸಾಂತ್ಯಾರು ವೆಂಕಟರಾಜ

ಗುಂಡ್ಮಿ, ಚಂದ್ರಶೇಖರ ಐತಾಳ.

೧೯೭೧

ಮಹಾತ್ಮಾ ಗಾಂಧೀ ಮೆಮೋರಿಯಲ್ ಕಾಲೇಜು
ಉಡುಪಿ – ೨.

# ನವೋದಯ ಪ್ರಚಾರ—ಇಂದು

ನಮ್ಮ ನವೋದಯ ಪ್ರಚಾರ ಪುಸ್ತಕ ಮಾಲೆ ಕಾಲೇಜಿನ ವಾರ್ಷಿಕ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣಗಳನ್ನು ಮಾತ್ರವೇ ಅಲ್ಲದೆ ಕನ್ನಡ ಸಾಹಿತಿ-ಕಲಾವಿದರ ಕುರಿತು ಲಿಖಿತ ಪ್ರಬಂಧಗಳನ್ನೂ ಪ್ರಕಟಿಸಲು ತೊಡಗಿ ಹದಿನೈದು ವರ್ಷಗಳಾದುವು. 'ಲಾಭ ಬೇಡ, ನಷ್ಟವಿಲ್ಲ' ಎಂಬ ಆರ್ಥಿಕ ತಳಹದಿಯಲ್ಲಿ ಕಾಲೇಜು ಕೈಗೊಂಡ ಈ ಪ್ರಕಟನ ಸಾಹಸಕ್ಕೆ ಕನ್ನಡಿಗರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ.

ಪ್ರಕಟನೆಯ ಬಗ್ಗೆ ನಾವು ಯಾವ ನಿಯಮಿತತೆಯನ್ನೂ ಇಟ್ಟುಕೊಂಡಿಲ್ಲವಾದರೂ ಇದುವರೆಗೆ ಸುಮಾರು ಹದಿನೈದು ಪುಸ್ತಕಗಳು ಅಚ್ಚಾಗಿವೆ. ಅದರಲ್ಲಿ ಎಷ್ಟೋ ತೀರಿವೆ. ಮುಂಬರುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ನೆಪದಲ್ಲಿ ಮತ್ತೊಮ್ಮೆ ಈ ಜಿಲ್ಲೆ ಕನ್ನಡ ನಾಡಿನ ಸೇವೆಗೆ ಅಣಿಗೊಳಿಸಿದ ಮಹನೀಯರ ಪರಿಚಯವನ್ನು ಪ್ರಾಂಕ್ತವಾಗಿ ಪ್ರಕಟಿಸಬೇಕೆಂಬ ನಮ್ಮ ಆಶಯ ದೊಡ್ಡದೆ. ಹಲವು ಮಂದಿ ಲೇಖಕರು ಇದರಲ್ಲಿ ಸಹಕರಿಸಿದ್ದಾರೆ. ಇದುವರೆಗೆ ಪ್ರಕಟಿತವಾದ (ಮರುಪ್ರಕಟಿತವಾದ) ಗೋವಿಂದ ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ ಅವರ ಜತೆಗೆ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶ ರಾವ್, ಹುರುಳಿ ಭೀಮರಾವ್, ಉಗ್ರಾಣ ಮಂಗೇಶ ರಾವ್, ಎಸ್. ವೆಂಕಟರಾಜ, ಕೈಯ್ಯಾರ ಕಿಞ್ಞಣ್ಣ ರೈ, ಅವರನ್ನೂ

ಘೋಷಿಸಿದ ಬಳಿಕ ಜಿಲ್ಲೆಯ ಸಾಹಿತ್ಯ ವ್ಯವಸಾಯದ ಒಂದು ಸಮಗ್ರ ಚಿತ್ರ ಮೂಡುವುದೆಂದು ನಾವು ಆಶಿಸಿದ್ದೇವೆ.

ಪುಸ್ತಕ ಪ್ರಕಟನೆಯ ಲೇಖಕರು ಮಾಲೆಯ ಇತಿಮಿತಿ ಮತ್ತು ನಿಯಮಿತ ಅವಧಿಯೊಳಗೇನೆ ತಮ್ಮ ಕೃತಿಯನ್ನು ರಚಿಸಿ ಉಪಕರಿಸಿದ್ದಾರೆ. ಅವರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ ನವಯುಗ ಪ್ರೆಸ್, ಅವರಿಗೂ ನಮ್ಮ ಕೃತಜ್ಞತೆ.

ಅಕ್ಟೋಬರ 21, 1971

**ಕು. ಶಿ. ಹರಿದಾಸ ಭಟ್ಟ**
ಪ್ರಧಾನ ಸಂಪಾದಕ

# ನಿವೇದನೆ

ಈ ಕೃತಿ ಒಟ್ಟಿಗೆ ಹದಿನೈದು ದಿನಗಳ ಬಿಡುವಿನ ವೇಳೆಯ ವ್ಯವಸಾಯ. ಸೆಪ್ಟಂಬರ್ ೫ರಂದು ಕವಿಗಳನ್ನು ಕಂಡು ಕೃತಿಗಳನ್ನು ಅವರಿಂದೇ ಸಂಪಾದಿಸಿ ಸೆಪ್ಟಂಬರ್ ೨೦ರ ಮೊದಲ ನವರಾತ್ರಿಯಂದು ಮುಗಿಸಿದೆ. ಈ ಕೃತಿಯನ್ನು ಬರೆಯುತ್ತೇನೆಂದು ನಾನು ಕನಸಿನಲ್ಲೂ ಎಣಿಸಿರಲಿಲ್ಲ. ಈ ವ್ಯವಸಾಯಕ್ಕೆ ಬೀಜ ಬಿತ್ತಿ, ನೀರು ಹರಿಸಿ, ಬೆಳಕು ಗಾಳಿ ಹಾಯಿಸಿದವರು ಸನ್ಮಾನ್ಯ ಹಿರಿಯರಾದ ಶ್ರೀ ಕು.ಶಿ. ಹರಿದಾಸ ಭಟ್ಟರು. ನನ್ನಲ್ಲಿ ಹಿರಿತನವನ್ನು ಕಂಡ ಅವರ ಹಿರಿತನಕ್ಕೆ ನಾನು ಸದಾ ಋಣಿಯಾಗಿದ್ದೇನೆ.

ಈ ಕೃತಿಯನ್ನು ಬರೆಯಲು ಮೊದಲು ಒಪ್ಪದೆ, ನಾನು ಬರೆದ ಕಾಗದಗಳಿಗೆ ಉತ್ತರ ಬರೆಯದೆ ಔದಾಸೀನ್ಯದಿಂದ ತಟಸ್ಥರಾಗಿದ್ದ ಕವಿಗಳು ಮತ್ತೆ ನಾನು ಅವರ ಮನೆಗೆ ಹೋದಾಗ 'ಪತ್ರಕ್ಕೆ ಉತ್ತರ ಬರೆಯದಿದ್ದರೂ ಬಂದ ನೀವು ಮನುಷ್ಯರಲ್ಲ!' ಎಂದು ನನ್ನನ್ನು ತಮ್ಮ ಮನೆಯವನೆಂಬಂತೆಯೇ ಆತ್ಮೀಯತೆಯಿಂದ ಕಂಡು ನಾನು ಕೇಳಿದುದನ್ನೆಲ್ಲ ಸಂತೋಷದಿಂದ ಹೇಳಿದರು. ಈ ಹಿರಿಯ ಕವಿಮಿತ್ರರನ್ನು ನಾನು ಕನ್ನಡ ಜನತೆಗೆ ಮೊತ್ತಮೊದಲ ಬಾರಿಗೆ ಪರಿಚಯಿಸುತ್ತಿದ್ದೇನೆ ಎಂಬುದು ನನ್ನ

ಸಂತೋಷ. ಅವರಿತ್ತ ಸಹಕಾರ, ಆತ್ಮೀಯತೆಗಾಗಿ ನಾನು ಅವರಿಗೆ ಆಭಾರಿ.

ಈ ಕೃತಿ ಕೇವಲ ಪರಿಚಯಾತ್ಮಕ ಎಂಬುದನ್ನು ಓದುಗರು ಮರೆಯಬಾರದು. ಇನ್ನೂ ವಿಮರ್ಶಾತ್ಮಕ, ತೌಲನಿಕ ಅಧ್ಯಯನ–ಇವುಗಳನ್ನು ಕೈಕೊಂಡರೆ ಈ ಕವಿಯ ಬಗೆಗೆ ಇನ್ನೂ ಸಾಕಷ್ಟು ಹೇಳುವುದಿದೆ ಎಂಬುದು ಅವರ ಕೃತಿಗಳನ್ನು ಓದಿದವರಿಗೆ ವಿದಿತ ವಿಚಾರ. ನನ್ನದು ಕೇವಲ ತೋರುಬೆರಳಿನ ಪ್ರಯತ್ನವಷ್ಟೆ.

ಈ ಕೃತಿಯಿಂದ ಕನ್ನಡ ನಾಡಿನ ಒಬ್ಬ ಹಿರಿಯ ಕವಿಗಳ ಪರಿಚಯ ಸ್ವಲ್ಪವಾದರೂ ಆದರೆ ನನ್ನ ಉದ್ದೇಶ ಸಾರ್ಥಕವೆಂದು ತಿಳಿಯುತ್ತೇನೆ.

ಈ ಅವಕಾಶವನ್ನು ನನ್ನ ಪಾಲಿಗೆ ಮಾಡಿಕೊಟ್ಟ ಶ್ರೀ ಕು. ಶಿ. ಹರಿದಾಸ ಭಟ್ಟರನ್ನು ಇನ್ನೊಮ್ಮೆ ನೆನೆಯುತ್ತೇನೆ.

ಮಂಗಳೂರು—೩, ೨೦–೯–೧೯೭೧. | ಇಂತು ನಿಮ್ಮ ವಿಶ್ವಾಸಿ,
**ಗುಂಡ್ಮಿ ಚಂದ್ರಶೇಖರ ಐತಾಳ**

## ೧.

# ಜೀವನ

“ಇಳೆಯು ಕೊಳೆಯು ತೊಳೆವೆನೆಂಬ
ಕಳಕಳಿಕೆಯು ನನ್ನದಲ್ಲ
ಮಳೆಯು ಸುರಿಸಿ ಹೊಳೆಯು ಹರಿಸು–
ವಹಂಕಾರವು ನನ್ನೊಳಿಲ್ಲ

ಹೊಲ ಹೊಲದಲಿ ಬಂಗಾರದ
ಬೆಳೆಯು ತರುವೆನೆನ್ನಲಿಲ್ಲ
ಕೊಳಲನೂದಿ ಕಾಮಿತಗಳ
ಕರೆವೆನೆಂದು ಹೇಳಲಿಲ್ಲ

× × ×

ಎಲ್ಲ ತಾಯಿಗಿಂತ ಚೆಲುವೆ
ನನ್ನ ತಾಯಿಯೆನ್ನುವೆನು
ನೂರು ನೂರು ನೂರು ವರ್ಷ
ಇದನೆ ಹಾಡಲಿಹುದು ನಾನು ! ”

ಶ್ರೀ ಎಸ್. ವೆಂಕಟರಾಜರು ೨೩–೧–೧೯೬೫ರಂದು ತಮ್ಮ ೫೨ನೆಯ ಹುಟ್ಟು ಹಬ್ಬದಂದು ಬರೆದ ‘ನನ್ನ ಹಾಡು’ ಎಂಬ ಕವನದ ಭಾಗವಿದು. ಇದು ಈ ಕವಿಯ ಅಂತರಂಗವೂ ಹೌದು; ಕಾವ್ಯಾಂತರಂಗವೂ ಹೌದು. ಉಡುಪಿಯ ಅಜ್ಜರ

ಕಾಡಿನಲ್ಲಿ ಕನ್ಯಾಕುಮಾರಿ–ಬೊಂಬಾಯಿ ರಸ್ತೆಯ ಎಡಬದಿಯಲ್ಲಿ ಹಳೆಯದೂ ಅಲ್ಲದ, ಆಧುನಿಕವೂ ಅಲ್ಲದ ಲಕ್ಷಣವಾದ ಒಂದು ಮನೆ. ಮನೆಯ ಮುಂದೆ ನೂರು, ನಾಲ್ಕು ತೆಂಗಿನ ಮರಗಳು; ಅವುಗಳ ತುಂಬ ಸೀಯಾಳಗಳು; ಅವುಗಳಲ್ಲಿ ಒಂದು ಕೆಂದಾಳಿ, ಚೆಂದೆಂಗು. ಅದರಲ್ಲಿ ಬಿಟ್ಟ ಸೀಯಾಳಗಳೆಲ್ಲ ಸಮಾರಾಧನೆಗಾಗಿ ವಿನಿಯೋಗ—ಬಂದವರಿಗೂ, ಬಾರದಿದ್ದರೆ ಮನೆಯುವರಿಗೂ! ಮನೆಯ ಹಿಂಭಾಗದಲ್ಲೂ ತೆಂಗು, ಕಂಗುಗಳ ತೋಟ. ಎಲ್ಲೆಲ್ಲೂ ಹಸುರಿನ ಸಿರಿ; ಮನೆಯಲ್ಲೆಲ್ಲ ಸಮೃದ್ಧಿಯ ತುಂಬು; ಕವಿಯ ಮನಸ್ಸು ಆ ತುಂಬಿಗೆ ಅನುಗುಣವಾಗಿ ಉದಾರ. ಇದು ಕನ್ನಡದ ಕವಿಯೊಬ್ಬರ ಮನೆ ಎನ್ನಲು ಸಂತೋಷವಾಗುತ್ತದೆ.

ನಾನು ಈ ಕವಿಯನ್ನು ಕಾಣಲು ಹೋದಾಗ ಅವರು ಒಂದು ಕೋವಿಯನ್ನು ಹಿಡಿದು ಅದರ ನಳಿಗೆಗೆ ಬಟ್ಟೆ ಹಾಕಿ ಅದನ್ನು ಚೊಕ್ಕ ಮಾಡುತ್ತಿದ್ದರು. ನನಗೆ ಒಮ್ಮೆ ಗಾಬರಿಯಾಯಿತು. 'ನಾನು ತಮ್ಮನ್ನು ನೋಡಲಿಕ್ಕೆ ಇಂಥ ದಿನ ಬರುತ್ತೇನೆ' ಎಂದು ಬರೆದ ಎರಡು ಪತ್ರಗಳಿಗೂ ಅವರದು ನಿರುತ್ತರ! ಹೀಗೆ ನಾನು ಅನಾಹ್ವಾನಿತನಾಗಿ ಹೋದುದರಿಂದ ನನ್ನ ಮೇಲೆಯೇ ಪ್ರಯೋಗಿಸಲು ಈ ಕೋವಿಯ ತಯಾರಿಯೋ ಎಂಬ ಗಾಬರಿ ನನಗಾಗದೆ ಇರಲಿಲ್ಲ. "ನಾನು ಉತ್ತರ ಬರೆಯದುದರಿಂದ ಮನುಷ್ಯರಾದವರು ಬರಲಿಕ್ಕಿಲ್ಲ ಎಂದು ನಂಬಿದ್ದೆ; ನೀವು ಬಂದೇ ಬಿಟ್ಟಿರಲ್ಲ, ಮಾರಾಯ್ರೇ" ಎಂದು ಕವಿಗಳ ಆಶ್ಚರ್ಯ. 'ಹಾಗಾದರೆ ನಾನು ಮನುಷ್ಯನಲ್ಲ ಎಂದು ನಿಮ್ಮ ಲೆಕ್ಕವೇ?' ಎಂದು ಅವರನ್ನು ಕೇಳಿದೆ. 'ಮನುಷ್ಯರಿಗೆ ಅತೀತ' ಎಂದರವರು. ನನಗೂ, ಅವರಿಗೂ ಸಮಾಧಾನವಾಯಿತು.

ಮತ್ತೆ ಶ್ರೀ ವೆಂಕಟರಾಜರನ್ನು ಅವರ ಕೋವಿಯ ಬಗೆಗೆ ಕೇಳಿದೆ. "ನಮ್ಮ ಊರು ಸಾಂತ್ಯಾರು, ನೋಡಿ. ಉಡುಪಿ ತಾಲೂಕಿನ ಪೆರ್ಡೂರಿನಿಂದ ಮತ್ತೂ ಎರಡೂವರೆ ಮೈಲಿ ದೂರ. ಘಟ್ಟದ ಬರೆಗೆ ಮತ್ತೆ ಹೆಚ್ಚು ದೂರವಿಲ್ಲ. ನಾನು ಹುಟ್ಟಿದುದು ಉಡುಪಿಯಲ್ಲೇ; ೨೩-೧-೧೯೧೩ರಲ್ಲಿ. ನನ್ನ ತಾಯಿಯ ಊರೂ ಉಡುಪಿ. ನಮ್ಮ ವಂಶದ ಹಿರಿಯರು ಮೂಲತಃ ಬಾರ್ಕೂರಿನಲ್ಲಿದ್ದರಂತೆ. ಸುಮಾರು ೨೫೦ ವರ್ಷದ ಹಿಂದೆ ಅವರು ಬಾರ್ಕೂರಿನಿಂದ ಸಾಂತ್ಯಾರಿಗೆ ವಲಸೆ ಬಂದರಂತೆ. ನಮ್ಮ ವಂಶದ ಒಂದು ಬುಡ ಬಿದನೂರು ಸಂಸ್ಥಾನದ ಕಾಲದಲ್ಲಿ ಬಾರ್ಕೂರಿನಿಂದ ಸಾಗರದ ಹತ್ತಿರದ ಕವಲಿಗೆ ಕವಲೊಡೆಯಿತಂತೆ. ಅಲ್ಲಿಯ ಕಪಿಲೇಶ್ವರ ದೇವಾಲಯದ ಅರ್ಚಕರಾಗಿದ್ದರಂತೆ. ನಾವು ಮೂಲತಃ ಸ್ಮಾರ್ತ ಬ್ರಾಹ್ಮಣರಾಗಿದ್ದರೂ ಈಗ ಮಾಧ್ವರು. ಸುಮಾರು ೨೦೦ ವರ್ಷದಿಂದ ನಮ್ಮ ಹಿರಿಯರೆಲ್ಲ ಕ್ಷತ್ರಿಯ ಪ್ರವೃತ್ತಿಯವರು. ಭಟ್ಟರು ಕ್ಷತ್ರಿಯ ಪ್ರವೃತ್ತಿಯವರಾಗಿರುವುದು ತುಂಬ ಅಪೂರ್ವವೆಂದು ಹೇಳುತ್ತಾರೆ."

ಆಗ ನನಗೆ ಅವರು ಕೋವಿಯನ್ನು ಯಾಕೆ ಹಿಡಿದಿದ್ದಾರೆ ಎಂಬುದು ತಿಳಿಯಿತು. ಅವರ ಹಿಜ್ಜರಿಗೆ ಕಪ್ಪು ಕುದುರೆ ಇತ್ತಂತೆ. ಅವರ ಅಜ್ಜಂದಿರು "ಸಾಂತ್ಯಾರು ಭಟ್ಟರು" ಎಂದೇ ಪ್ರಸಿದ್ಧರಾಗಿದ್ದರಂತೆ. ಅವರು ಕುದುರೆಯನ್ನೂ, ಕಾರನ್ನೂ ಇಟ್ಟಿದ್ದರಂತೆ. ಅವರು ಆ ಊರಿಗೆ ಪಟೇಲರಾಗಿದ್ದರಂತೆ. ಅವರಿಂದ ಇಂದಿನ ವರೆಗೆ ಆ ಪಟೇಲಿಕೆ ಮುಂದುವರಿಯುತ್ತಿದೆಯಂತೆ. ಈಗ ಶ್ರೀ ವೆಂಕಟರಾಜರು ಸಾಂತ್ಯಾರಿಗೆ ಪಟೇಲರಾಗಿದ್ದಾರೆ. ಇವರ ತಂದೆ ಶ್ರೀ ಅನಂತಪದ್ಮನಾಭ ಭಟ್ಟರು ಅಜ್ಜಂದಿರಿಗೆ ತದ್ವಿರುದ್ಧವಂತೆ. ಅವರು ದಕ್ಷಿಣ ಕನ್ನಡ ಜಿಲ್ಲೆಯ ಕಾಂಗ್ರೆಸ್ ಚಳುವಳಿಯಲ್ಲಿ

ಭಾಗವಹಿಸಿದವರಲ್ಲಿ ಅಗ್ರಗಣ್ಯರಾಗಿದ್ದರಂತೆ. ಅವರು ಅಪ್ಪಟ ಗಾಂಧಿ ಭಕ್ತರು. ಕಾರ್ನಾಡ ಸದಾಶಿವರಾಯರ ಜತೆಯಲ್ಲಿ ಕಾಂಗ್ರೆಸ್ಸಿಗಾಗಿ ಉಡುಪಿಯಲ್ಲಿ ಕೆಲಸ ಮಾಡಿ "ಉಡುಪಿಯ ಗಾಂಧಿ" ಎನಿಸಿದರು. ಉಡುಪಿ ತಾಲೂಕ್ ಕಾಂಗ್ರೆಸ್ ಅಧ್ಯಕ್ಷ ರಾಗಿದ್ದರು. ೧೯೩೩ರಲ್ಲಿ ಶ್ರೀ ಚಕ್ರವರ್ತಿ ರಾಜಗೋಪಾಲಾಚಾ ರ್ಯರ ಜತೆಯಲ್ಲಿ ವೆಲ್ಲೂರು ಜೈಲಿನಲ್ಲಿ ಒಂದು ವರ್ಷ ಕಾಲ ಸೆರೆ ಮನೆ ವಾಸವನ್ನು ಅನುಭವಿಸಿದವರು. ಜೈಲಿನಲ್ಲಿದ್ದಾಗ ಧಾನ್ಯಗ ಳನ್ನು ಮೊಳಕೆ ಬರಿಸಿ ಅವುಗಳನ್ನೇ ತಮ್ಮ ಆಹಾರವನ್ನಾಗಿ ಮಾಡಿಕೊಂಡಿದ್ದರಂತೆ. ಮತ್ತೆ ಊರಿಗೆ ಬಂದ ಮೇಲೆ ಸಾಯುವ ವರೆಗೂ ಅದೇ ಅವರ ಆಹಾರವಾಗಿತ್ತಂತೆ. ತಮ್ಮ ಬಟ್ಟೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರಂತೆ. ನಾಲ್ಕು ರಾಷ್ಟ್ರೀಯ ಶಾಲೆಗ ಳನ್ನು ನಡೆಯಿಸಿ ಎಲ್ಲ ಕಳೆದುಕೊಂಡು ಉಳಿದ ಒಂದು ಓಲೆ ಕೊಡೆ ಹಿಡಿದು ತಿರುಗುತ್ತಿದ್ದರಂತೆ. ಗಾಂಧೀಜಿಯವರ ಮರಣ ವಾರ್ತೆಯನ್ನು ಕೇಳಿ ಅವರಿಗೆ ಹೃದಯವೇದನೆ ಉಂಟಾಯಿ ತಂತೆ. ಅದೇ ಮತ್ತೆ ಮೂರನೆಯ ಬಾರಿ ಮರುಕೊಳಿಸಿ ಅವರ ಪ್ರಿಯ ನೇತಾರನತ್ತ ೧೯೪೮ ಮೇ ೧೦ರಂದು ಕರೆದುಕೊಂಡು ಹೋಯಿತಂತೆ. ವೆಂಕಟರಾಜರ ತಾಯಿ ಗೌರಮ್ಮನವರೂ ರಾಜ ಕೀಯದಲ್ಲಿ, ಸ್ವಾತಂತ್ರ್ಯ ಚಳವಳಿಯಲ್ಲಿ ಹೋರಾಡಿದ್ದರಂತೆ. ಬೆಳಗಾಂ ಕಾಂಗ್ರೆಸ್ ಅಧಿವೇಶನ, ಕಾಕಿನಾಡ ಕಾಂಗ್ರೆಸ್ ಅಧಿ ವೇಶನಗಳಲ್ಲಿ ತಮ್ಮ ಪತಿಯೊಂದಿಗೆ ಪ್ರತಿನಿಧಿಯಾಗಿ ಭಾಗವಹಿ ಸಿದ್ದರಂತೆ. ಈಗ ಅವರಿಗೆ ೭೮ ವರ್ಷ. ಸಾಂತ್ಯಾರು ಹಳ್ಳಿಯ ಮನೆಯಲ್ಲಿ ತಮ್ಮ ವೃದ್ಧಾಪ್ಯವನ್ನು ಕಳೆಯುತ್ತಿದ್ದಾರೆ.

ಇಂಥ ವೀರ ವಂಶದಲ್ಲಿ ಶ್ರೀ ಸಾಂತ್ಯಾರು ವೆಂಕಟರಾ ಜರು ಹುಟ್ಟಿ ಬೆಳೆದು ಬಂದರು. ವಂಶ ಪಾರಂಪರ್ಯ

ವಾದ ರಾಷ್ಟ್ರಭಕ್ತಿ, ಕ್ಷತ್ರಿಯ ಪ್ರವೃತ್ತಿಗಳ ಜತೆಗೆ ಇವರಲ್ಲಿ ಕವಿತಾಶಕ್ತಿ ಕೊನರಿತು.

ಶ್ರೀ ವೆಂಕಟರಾಜರದು ತುಂಬು ಸುಂದರ ಸಂಸಾರ. ಅವರಿಗೆ ಐದು ಜನ ಮಕ್ಕಳು. ಇಬ್ಬರು ಗಂಡು ಮಕ್ಕಳು, ಮೂವರು ಹುಡುಗಿಯರು. ಅವರ ಶ್ರೀಮತಿ ಮನೋರಮಾ ದೇವಿಯವರು ಮಂಗಳೂರಿನ ಒಬ್ಬ ದೊಡ್ಡ ಡಾಕ್ಟರರ ಮಗಳು; ಸದ್ಗೃಹಿಣಿ; ಸುಗುಣಸಂಪನ್ನೆ. ಇವರ ದೊಡ್ಡ ಮಗ ಶ್ರೀ ಜಯಂತರಾಜ ಇತಿಹಾಸದಲ್ಲಿ ಎಂ.ಎ., ವರೆಗೆ ಓದಿ ಈಗ ಮಂಗಳೂರಿನ ಡೊಂಗರಕೇರಿ ಕರ್ಣಾಟಕ ಬ್ಯಾಂಕಿನಲ್ಲಿ ಕೆಲಸಮಾಡುತ್ತಿದ್ದಾರೆ. ಎರಡನೆಯ ಮಗ ಶ್ರೀ ವಸಂತರಾಜ ಬನಾರಸ್ ವಿಶ್ವವಿದ್ಯಾನಿಲಯದಲ್ಲಿ ಇಂಜಿನಿಯರ್ ಮಾಡಿದ್ದಾರೆ. ದೊಡ್ಡ ಮಗಳು ಶ್ರೀಮತಿ ಮಧುರಂಜಿನೀ ಎರಡು ಪದವಿ ಮಾಡಿ ಅಮೇರಿಕದಲ್ಲಿ ಇಂಜಿನಿಯರ್ ಪತಿಯ ಜತೆಗೆ ಇದ್ದಾಳೆ. ಎರಡನೆಯ ಮಗಳು ಕುಮಾರಿ ಪದ್ಮಿನಿ ಬಿ. ಎ., ಮಾಡಿ ಮನೆಯಲ್ಲಿದ್ದಾರೆ. ಹೇಮನಳಿನಿ ಏಳುವರ್ಷದ "ಕಡೆಕಂಜಿ"!

ಶ್ರೀ ವೆಂಕಟರಾಜರು ಶಾಲೆಯಲ್ಲಿ ಹೆಚ್ಚು ಓದಿದವರಲ್ಲ. ಉಡುಪಿಯಲ್ಲಿ ಆಗಿನ ಕಾಲದಲ್ಲಿದ್ದ ನ್ಯಾಶನಲ್ ಹೈಸ್ಕೂಲಲ್ಲಿ ಎಸ್. ಎಸ್. ಎಲ್. ಸಿ. ವರೆಗೆ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದರು. ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಆರು ವರ್ಷ ತರ್ಕಶಿರೋಮಣಿ ಪೂರ್ವಭಾಗದ ವರೆಗೆ ಓದಿದರು. ಉಡುಪಿಯಲ್ಲಿ ಪ್ರಸಿದ್ಧರಾಗಿದ್ದ ಶ್ರೀ ವಾಸುದೇವಾಚಾರ್ಯರು ಕವಿಯ ಸಾಹಿತ್ಯದ ಗುರುಗಳಂತೆ.

೧೯೨೩—೨೪ರ ಸುಮಾರಿನಲ್ಲಿ ಬರೋಡಾದಲ್ಲಿ ಲೈಬ್ರೆರಿಯನ್ ಆಗಿದ್ದ ಶ್ರೀ ಪಣಿಯಾಡಿಯವರು ಈ ಕವಿ ಚೇತನವನ್ನು

ಗುರುತಿಸಿದರು. ಪಣಿಯಾಡಿ ಅವರು ತುಳುನಾಡು ಚಳವಳಿ ಆರಂಭಿಸಿ 'ಅಂತರಂಗ' ಎಂಬ ಪತ್ರಿಕೆಯನ್ನು ಆರಂಭಿಸಿದರು. ಅದರಲ್ಲಿ ಅವರು ಈ ಕವಿಯ ಕತೆ, ಲೇಖನ, ಕವಿತೆಗಳನ್ನು ಪ್ರಕಟಿಸಿದರಂತೆ.

ಕವಿಯ ಸಾಹಿತ್ಯಾಚಾರ್ಯರಾದ ಶ್ರೀ ವಾಸುದೇವಾಚಾರ್ಯರು ಒಮ್ಮೆ ಈ ಕವಿ ಹೇಳಿದ,

"ನಾರಿಯೇ ತಾನಾಗಿ ಬಾರೆಂದು ಕರೆಯುತಿರೆ
ಸಾರದಿಹ ಧೀರನವನಾರೊ ಜಗದಿ ?"

ಎಂಬ ವಾಕ್ಯವನ್ನು ಕೇಳಿ ಅದು ಯಾರ ಕವಿತೆ ಎಂದು ಕೇಳಿದರಂತೆ. 'ನನ್ನದು' ಎಂದಾಗ ಆಶ್ಚರ್ಯಪಟ್ಟು, 'ನೀನು ಯಾರೋ ದೊಡ್ಡ ಕವಿಯ ಕವಿತೆಯ ಭಾಗವನ್ನು ಉದ್ಧರಿಸುತ್ತಿರುವೆ ಎಂದು ತಿಳಿದೆ' ಎಂದರಂತೆ. ಆಗ ಈ ಕವಿಗೆ ಕೇವಲ ಹದಿನಾರು ವರ್ಷ ಪ್ರಾಯ. ಅವರ ಈ ಕವಿ ಚೇತನವನ್ನು ಗುರುತಿಸಿ ಬರೆಯುವಂತೆ ಬೆನ್ನುತಟ್ಟಿದರಂತೆ. 'ವರ್ಷ ಹದಿನಾರರಂದು ನನ್ನ ಕವಿತಾಕಾಮಿನಿ ನೆರೆದು ಬಂದು ಹೀಗೆ ಕರೆದು ಗುಣುಗುಟ್ಟಿರುವಳು' ಎಂದು ಕವಿ ಸ್ಮರಿಸಿಕೊಳ್ಳುತ್ತಾರೆ.

"ಶ್ರೀ ಕಡೆಂಗೋಡ್ಲು ಶಂಕರ ಭಟ್ಟರ 'ರಾಷ್ಟ್ರಬಂಧು' ಪತ್ರಿಕೆಯಲ್ಲಿ ನನ್ನ ಮೊದಲ ಕವನ, ಕತೆಗಳು ಪ್ರಕಟಿತವಾದುವು. ಅವರೂ ನನ್ನನ್ನು ಬರೆವಣಿಗೆಯ ಕ್ಷೇತ್ರದಲ್ಲಿ ಮೊತ್ತ ಮೊದಲು ಪ್ರೋತ್ಸಾಹಿಸಿದ ಹಿರಿಯರು," ಎಂದು ಕವಿ ನೆನೆಯುತ್ತಾರೆ.

"ಮತ್ತೆ ಶ್ರೀ ಜಿ. ಆರ್. ಪಾಂಡೇಶ್ವರರು ನನ್ನನ್ನು ಪ್ರೋತ್ಸಾಹಿಸಿದ ಮಹನೀಯರು. ಆ ಕಾಲದಲ್ಲಿ ನಾನು ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಓದುತ್ತಿದ್ದೆ. ಅವರು ಮಂಗಳೂರಿನ ಸೈಂಟ್ ಎಲೋಸಿಯಸ್ ಕಾಲೇಜಿನಲ್ಲಿ

ಓದುತ್ತಿದ್ದರು. ಅವರು ಬ್ರಹ್ಮಾವರದ ತಮ್ಮ ಮನೆಗೆ ಹೋಗುತ್ತ ನನ್ನನ್ನು ಮಾತನಾಡಿಸಿ ಹೋಗುತ್ತಿದ್ದರು. ನನ್ನ ಕವನಗಳನ್ನು ನೋಡಿ, ಬರೆಯಿರಿ ಎಂದು ಬೆನ್ನು ತಟ್ಟಿದರು" ಎಂದು ಕವಿ ಸ್ಮರಿಸಿಕೊಳ್ಳುತ್ತಾರೆ.

ಕವಿಯ ಜತೆಯಲ್ಲಿ ಆ ಕಾಲದಲ್ಲಿ ಉಡುಪಿಯಲ್ಲಿ ಬರೆಯುತ್ತಿದ್ದವರು ಶ್ರೀ ಪಾಡಿಗಾರ್ ವೆಂಕಟ್ರಮಣಾಚಾರ್ಯ (ಲಾಂಗೂಲಾಚಾರ್ಯ, ಪಾವೆಂ). ಅಂತರಂಗ, ಪ್ರಬುದ್ಧ ಕರ್ಣಾಟಕ, ಜಯ ಕರ್ಣಾಟಕ, ರಾಷ್ಟ್ರಬಂಧು, ನವಯುಗ, ಧುರೀಣ ಮೊದಲಾದ ಪತ್ರಿಕೆಗಳಿಗೆ ಇಬ್ಬರೂ ಬರೆಯುತ್ತಿದ್ದರಂತೆ.

"ಆ ಕಾಲದಲ್ಲಿ ಉಡುಪಿಯ ಸಾಹಿತ್ಯ ಕ್ಷೇತ್ರದಲ್ಲಿ ಬಹಳ ಹಿರಿಯರು ಶ್ರೀ ಕಡೇಕಾರ್ ರಾಜಗೋಪಾಲಕೃಷ್ಣರಾಯರು ಅವರು ಆಗ ಉಡುಪಿಯ ಗೋವಿಂದ ಪೈಗಳಿಂಬಂತೆ ಇದ್ದರು. ಈಗ ಉಡುಪಿಗೆ ಯಾವ ಸಾಹಿತಿ ಬಂದರೂ ಅವರನ್ನು ಶ್ರೀ ಕು. ಶಿ. ಹರಿದಾಸ ಭಟ್ಟರು ನೋಡಿಕೊಳ್ಳುವ ಹಾಗೆ ರಾಜಗೋಪಾಲಕೃಷ್ಣರಾಯರ ಮನೆಯಲ್ಲಿ ಸಾಹಿತಿಗಳ ಬಿಡಾರ. ಅವರಿಗೆ ಸಮಾರಾಧನೆ ಸರ್ವಸಾಮಾನ್ಯವಾಗಿತ್ತು" ಎಂದು ಕವಿ ತಮ್ಮ ಬಾಲ್ಯದ ಚಟುವಟಿಕೆಗಳನ್ನು ನೆನೆದರು.

"ನನ್ನ ಮುಖ್ಯವಾದ ಹವ್ಯಾಸ ಬೇಟೆ; ತೋರಿಸುತ್ತೇನೆ ಬನ್ನಿ ಎಂದು ಕವಿ ತಮ್ಮ ಮನೆಯ ಹಜಾರದಲ್ಲಿ ಗೋಡೆಯ ಮೇಲೆ ಹಾಕಿದ ಚಿಟ್ಟೆಹುಲಿ, ಪಟ್ಟೆಹುಲಿಗಳ ಚರ್ಮಗಳನ್ನು ತೋರಿಸಿದರು. ಅದನ್ನು ಹೊಡೆದ ಕತೆಯನ್ನೂ ವಿವರಿಸಿದರು :

"ಸಾಂತ್ಯಾರಿನಲ್ಲಿ ಸುತ್ತುಮುತ್ತ ಗುಡ್ಡಕಾಡಿನ ಪ್ರದೇಶ ನೋಡಿ. ಒಮ್ಮೆ ಹೀಗೆ ಬೇಟೆಯಾಡಲು ಹೋದಾಗ ಆಳೆತ್ತ

ರದ ಕಾಡುಹುಲ್ಲಿನ ಮಧ್ಯೆ ಬಾಲವನ್ನೆತ್ತಿ ಚಿಟ್ಟೆಹುಲಿ ಬರುತ್ತಿತ್ತು. ನಾನು ಗುಂಡು ಹೊಡೆದೆ. ಹುಲಿಗಳು ಸಾಮಾನ್ಯವಾಗಿ ಗುಂಡು ತಗಲಿದ ಕೂಡಲೇ ಸಾಯದಿದ್ದರೆ ಹತ್ತಿರದ ನೀರಿನಾಶ್ರಯದ ಕಡೆಗೆ ಹೊರಳುತ್ತವೆ. ನಾನು ಸ್ವಲ್ಪ ಹೊತ್ತು ಕಾದು ರಕ್ತದ ಜಾಡನ್ನು ಅನುಸರಿಸಿ ಸ್ವಲ್ಪ ಮುಂದಕ್ಕೆ ಹೋಗಲು ಹುಲಿ ನೀರಿಗೆ ಮೈಗೊಟ್ಟು ಮಲಗಿತ್ತು. ಅಲ್ಲೊಬ್ಬ ಹಳ್ಳಿಯವ ಅದು ಹಂದಿ ಎಂದು ತಿಳಿದುಕೊಂಡು ತಿನ್ನುವ ಆಸೆಯಿಂದ ಅದನ್ನು ಇನ್ನೊಮ್ಮೆ ಹೊಡೆದು ತನ್ನ ಪಾಲನ್ನು ಗಿಟ್ಟಿಸಿಕೊಳ್ಳಲು ಅದರ ಮುಂದೆ ಸುಳಿದ. ಹುಲಿ ಪ್ರಾಣ ಸಂಕಟದಿಂದ ಒದ್ದಾಡುತ್ತಿತ್ತು. ನಾನು ಅದು ಹುಲಿ ಎಂದು ಹೇಳಿದ ಮಾತನ್ನು ಕೇಳದೆ ಅವನು ಹತ್ತಿರ ಹೋದಾಗ ಅದು ಕೊನೆಯ ಬಾರಿಗೆ ಅವನ ಮೇಲೆ ಎರಗಿತು. ಅದು ಅವನ ಮೇಲೆ ಬೀಳುವ ಮೊದಲು ಗುಂಡು ಹಾರಿಸಿ ಉರುಳಿಸಿದೆ. ಬಡಪಾಯಿ ಬದುಕಿದ. ಹುಲಿ ಬಾಲ ನಿಮಿರಿಸಿ ಬರುವಾಗ ಅದರ ಬಾಲ ಎಲ್ಲಾದರೂ ಕೆಳಗಾಯಿತು ಎಂದರೆ ಮರುಕ್ಷಣದಲ್ಲಿ ಆ ಹುಲಿ ನಮ್ಮ ಮೇಲೆ ಎಂದರ್ಥ" ಎಂದು ಕವಿ ತಮ್ಮ ಹುಲಿ ಬೇಟೆಯ ಅನುಭವವನ್ನು ಹೇಳಿದರು. ನನಗೆ 'ಪರವಾಯಿಲ್ಲ, ಭಟ್ಟರು ಬರಿಯ ಹುಳಿ ಹೊಡೆಯುವವರಲ್ಲ; ಹುಲಿಯನ್ನೂ ಹೊಡೆಯಬಲ್ಲರು' ಎಂದು ನಮ್ಮ ಕವಿಯ ಬಗೆಗೆ ಹೆಮ್ಮೆ ಮೂಡಿತು.

ಕವಿ ಮತ್ತೆ ತಮ್ಮ ಬೇಟೆಯ ಅನುಭವವನ್ನು ಹೇಳತೊಡಗಿದರು. 'ಒಮ್ಮೆ ಕಾಡುಕೋಣವನ್ನು (Bison) ಹೊಡೆದಿದ್ದೆ. ಬತ್ತದ ಗದ್ದೆಯನ್ನು ಒಕ್ಕಿ ಹಾಳುಮಾಡುತ್ತಿದ್ದುದರಿಂದ ಅದನ್ನು ಬೇಟೆಯಾಡಿದೆ. ಕಾಡಿನಲ್ಲಿ ಅದರ ಗಾಂಭೀರ್ಯವನ್ನು

ಕಾಣಬೇಕು. ಕಪ್ಪು ಮೈಗೆ ಒಪ್ಪುವ ಬಿಳಿಯ ವಿನ್ಯಾಸ. ನೆತ್ತಿಯ ಮೇಲೆ ಬಿಳಿಯ ಹುಂಡು. ನಾಲ್ಕು ಕಾಲುಗಳ ಕೆಳ ಭಾಗ ಬಿಳಿದು. ಬಾಲದ ತುದಿ ಬಿಳಿ. ಎಲ್ಲ ಕಾಡುಕೋಣಗಳೂ ಇದೇ ರೂಪದವು. ಕೋಣದ ಆಚೆಕಡೆ ಆರಡಿ ಎತ್ತರದ ಮನುಷ್ಯ ನಿಂತರೂ ಕಾಣಿಸದಂಥ ನಿಲುವು. ಆನೆಯ ಗಾತ್ರ. ಅದರ ಮಾಂಸ ತೆಗೆದರೆ ಸಾಗಿಸಲು ಒಂದು ಲಾರಿ ಬೇಕು! ಒಮ್ಮೆ ನನ್ನ ಹತ್ತಿರವೇ ಬಂದಿದ್ದ ಒಂದು ಕಾಡುಕೋಣವನ್ನು ಹೊಡೆಯದೆ ಬಿಟ್ಟೆ—ಅದರ ಆ ಸುಂದರ ಕಾಯ ಕಾಡಿನಲ್ಲಿ ವ್ಯರ್ಥವಾಗಿ ಕೊಳೆತು ಹೋಗುವುದಲ್ಲ ಎಂದು. ಆ ಕೋಣ ಇಂದಿಗೂ ಇದೆ!

“ಒಮ್ಮೆ Man-eater ಬೇಟೆಗೆ ಹೋಗಿದ್ದೆ. ಸರಕಾರದವರು ಅದನ್ನು ಏರ್ಪಡಿಸಿದ್ದರು. ಹಾಲಾಡಿ-ಶಂಕರನಾರಾಯಣದ ಕಡೆ ಒಂದು ನರಭಕ್ಷಕ ಹುಲಿ ಇತ್ತು. ಆಗಲೇ ಎಂಟೊಂಬತ್ತು ಜನರನ್ನು ತಿಂದಿತ್ತು. ಕುಂದಾಪುರ ಉಡುಪಿ ತಾಲೂಕುಗಳ ಗಡಿಯ ಕಾಡಿನಲ್ಲಿ ಬೇಟೆಯ ವ್ಯವಸ್ಥೆಯಾಯಿತು. ನೂರಾರು ಜನರು ಅಟ್ಟಿಕೊಂಡು ಬೊಬ್ಬೆ ಹಾಕುತ್ತ ಬಂದರು. ಬೇಟೆಗಾರರೆಲ್ಲ ಹುಲಿ ಇನ್ನೊಂದು ಕಾಡನ್ನು ಹೊಗ್ಗುವ ಸ್ಥಳದಲ್ಲಿ ಅವಿತು ಕುಳಿತಿದ್ದೆವು. ಸುಮಾರು ೫೦ ಅಡಿ ದೂರಕ್ಕೆ ಒಬ್ಬೊಬ್ಬನಂತೆ ಅವಿತುಕೊಂಡಿದ್ದೆವು. ಮೊದಲು ಜಿಂಕೆಗಳೆಲ್ಲ ಓಡಿ ಬರುತ್ತವೆ. ಕಟ್ಟ ಕಡೆಗೆ ಹುಲಿ ಬರುತ್ತದೆ. ನನಗಿಂತ ಸುಮಾರು ೫೦ ಅಡಿ ದೂರದಲ್ಲಿ ಏನೋ ಹುಲಿಯ ಹಾಗೆ ಸರಿದುದು ಕಾಣಿಸಿತು. ಇನ್ನೇನು ಗುರಿಯಿಡ ಬೇಕು ಎನ್ನುವಷ್ಟರಲ್ಲಿ ಬೇಟೆಗಾರರಾರಿಗೋ ಬೆಲ್ಲ ನೀರು ತರುವ ನಾಲ್ಕೈದು ಮಂದಿ ನಮ್ಮಿಂದ ಅಡ್ಡವಾಗಿ ಸರಿದು ಹೋದರು. ಇವರನ್ನು ಕಂಡು ಆ ಹುಲಿ ಅಲ್ಲಿಂದಲೇ ಅಡ್ಡಕ್ಕೆ

ತಿರುಗಿ ಮಾಯವಾಯಿತು. ಅನಂತರ ಅದು ಇಬ್ಬರನ್ನು ತಿಂದು ಹೇಗೋ ಸತ್ತಿರಬೇಕು. ಹುಲಿಗೆ ಮನುಷ್ಯ ಬಹಳ ಸುಲಭದ ಕೊಳ್ಳೆ. ಅವನಲ್ಲಿ ಆಯುಧ ಇಲ್ಲದಿದ್ದಾಗ ಹುಲಿಯ ಬಾಯಿಗೇ ಅವನು ಬಲಿಯಾಗಬೇಕು. ಹಾಗಾಗಿ ಒಮ್ಮೆ ಹುಲಿ ಮನುಷ್ಯನ ರುಚಿ ನೋಡಿತೆಂದರೆ ಮತ್ತೆ ಅದಕ್ಕೆ ಅವನೇ ಬೇಕು. ಹೀಗೆ ಹುಲಿ ನರಭಕ್ಷಕವಾಗುತ್ತದೆ. ಹುಲಿಗೂ, ಕಾಡುಹಂದಿಗೂ ಸೆಣ ಸಾಟವಾಯಿತೆಂದರೆ ಯಾವುದಾದರೂ ಒಂದರ ವಿಮುಕ್ತಿಯಾಗದೆ ಹೋರಾಟ ನಿಲ್ಲದು. ಹೆಚ್ಚಾಗಿ ಕಾಡುಹಂದಿಯೇ ಸಾಯುತ್ತದೆ. ಅವಕ್ಕೆ ದಾಡೆಯೊಂದೆ. ಹುಲಿಗೆ ಐದು ಬಾಯಿಯ ಲೆಕ್ಕ; ನಾಲ್ಕು ಚೋಟುಗಳು, ಒಂದು ಬಾಯಿ!"

"Hunting ಬಗೆಗೆ ನೀವು ನಿಮ್ಮ ಅನುಭವವನ್ನೆಲ್ಲ ಬರೆಯ ಬಹುದಲ್ಲ. ನಮ್ಮ ಸಾಹಿತ್ಯಗಳಲ್ಲಿ ಬೇಟೆಯ ಬಗೆಗೆ ಇಷ್ಟು ಅನುಭವವಿರುವವರು ಬಹುಶಃ ನೀವೊಬ್ಬರೇ ಎಂದು ಕಾಣುತ್ತದೆ. ನಮ್ಮಲ್ಲಿ ಬೇಟೆಯ ಬಗೆಗೆ ಅನುವಾದಗಳಿವೆಯೇ ಹೊರತು ಸ್ವತಂತ್ರ ಕೃತಿಗಳಿಲ್ಲ" ಎಂದು ನಾನು ಅವರನ್ನು ಪ್ರೇರೇಪಿಸಿದೆ. ಅದಕ್ಕೆ ಅವರು, 'ನಮ್ಮಲ್ಲಿ Job Hunting ಮಾತ್ರ ಉಂಟು' ಎಂದಾಗ ಎದ್ದು ಬಿದ್ದು ನಗದಿರಲಾಗಲಿಲ್ಲ.

ಶ್ರೀ ವೆಂಕಟರಾಜರು ಇಂಗ್ಲಿಷಿನಲ್ಲಿ ಪ್ರಸಿದ್ಧವಾದ ಬೇಟಿಯ ಸಾಹಿತ್ಯವನ್ನೆಲ್ಲ ಓದಿದ್ದಾರೆ. ನಮ್ಮ ವಿಶ್ವ ವಿದ್ಯಾನಿಲಯಗಳಾಗಲೀ, ಪ್ರಕಾಶಕರಾಗಲೀ ಅವರಿಂದ ಬೇಟೆಯನ್ನು ಕುರಿತು ಅನುಭವಪೂರ್ಣವಾದ, ಅಧ್ಯಯನಪೂರ್ಣವಾದ ಗ್ರಂಥಗಳನ್ನು ಬರೆಯಿಸಿದರೆ ಅವು ಕನ್ನಡ ಸಾಹಿತ್ಯದಲ್ಲಿ ವಿರಳವಾದ ಆ ಸಾಹಿತ್ಯ ಪ್ರಕಾರದಲ್ಲಿ ಶ್ರೇಷ್ಠ ಕೃತಿಗಳಾಗ ಬಲ್ಲುವು ಎಂದು ನನಗೆನಿಸಿತು. "ಬೇಟೆಯನ್ನು ಕುರಿತು ಇಂಗ್ಲಿಷಿನಲ್ಲಿರುವ ಸಾಹಿತ್ಯ ಕೃತಿ

ಗಳನ್ನು ಓದುತ್ತಿದ್ದರೆ ಹುಲಿ ನಮ್ಮ ಬೆನ್ನ ಹಿಂದೆಯೇ ಬಂತೋ ಎಂಬ ಭಾವನೆ ಬರುತ್ತದೆ. ರಾತ್ರಿ ಹೊತ್ತು ಓದುತ್ತಿದ್ದರೆ ಹೆದರಿಕೆಯಾಗುತ್ತದೆ" ಎಂದರವರು.

ಕವಿಯ ಮನೆಯ ಗೋಡೆಯ ಮೇಲೆ ಹುಲಿಚರ್ಮಗಳನ್ನು ಕಂಡಂತೆ ಬುದ್ಧನ ಅನೇಕ ವರ್ಣಚಿತ್ರಗಳನ್ನು ಕಂಡೆ. ನನಗೆ ಬೇಟೆ ಬುದ್ಧ ವಿರೋಧಾಭಾಸಗಳಾಗಿ ಕಂಡು, "ಏನು ಸ್ವಾಮಿ, ನೀವು ಬುದ್ಧ ಭಕ್ತ ಎನ್ನುತ್ತೀರಿ; ಪ್ರಾಣಿಹಿಂಸೆ ಮಾಡುತ್ತೀರಿ. ಇದು ನನಗೆ ವಿಚಿತ್ರವಾಗಿ ಕಾಣಿಸುತ್ತಿದೆಯಲ್ಲ" ಎಂದೆ. ಅದಕ್ಕವರು, "ನಾನು ಬುದ್ಧನನ್ನು ಪ್ರೀತಿಸುತ್ತೇನೆ. ಜತೆಗೆ ಕ್ರೂರ ಪ್ರಾಣಿಗಳನ್ನು ಮಾತ್ರ ಕೊಲ್ಲುತ್ತೇನೆ. ಅದು ನನ್ನ ರಕ್ತಗುಣವಾದ ಕ್ಷತ್ರಿಯ ಪ್ರವೃತ್ತಿ" ಎಂದರು.

ಕವಿಯ ಇನ್ನೊಂದು ಹವ್ಯಾಸ ಸಂಗೀತ. ದಕ್ಷಿಣ ಕನ್ನಡದ ಚೌಡಯ್ಯನವರಾಗಿದ್ದ ದಿ. ಪಿಟೀಲ್ ಮಂಜುನಾಥಯ್ಯನವರಿಂದ ಪಿಟೀಲ್ ಅಭ್ಯಾಸ ಮಾಡಿದ್ದಾರೆ. ಬಾಯ್ದೆರೆ ಸಂಗೀತವೂ ಗೊತ್ತು."ಸಂಗೀತದ ಬಗೆಗೆ ನನಗೆ ಇರುವ ಅಭಿರುಚಿಯಿಂದಲೇ ನನ್ನ ಕವಿತೆಗಳಲ್ಲಿ ನಾದ, ಲಯಗಳು ಮೂಡಿದುವು" ಎಂದರು.

ಕವಿಯ ಮತ್ತೊಂದು ಹವ್ಯಾಸ ಜ್ಯೋತಿಶ್ಯಾಸ್ತ್ರ. "ನನಗೆ ಜ್ಯೋತಿಷ್ಯದಲ್ಲಿಯೂ ಸ್ವಲ್ಪ ಪ್ರವೇಶ ಉಂಟು" ಎಂದರು.

'ಇಷ್ಟೆಲ್ಲವನ್ನೂ ನೀವು ಹೇಗೆ ಬೆಳೆಸಿಕೊಂಡಿರಿ?' ಎಂದು ನಾನು ಕೇಳಿದಾಗ ಕವಿ ಸ್ವಾರಸ್ಯವಾಗಿ,"ನೋಡಿ,ನಿರುದ್ಯೋಗವೇ ನನ್ನ ಉದ್ಯೋಗ; ಇನ್ನೂ ಕೆಲಸವನ್ನು ಮಾಡಬಹುದಿತ್ತು; ಸೋಮಾರಿತನ ಬಿಡುವುದಿಲ್ಲ" ಎಂದು ನಕ್ಕರು.

ಕವಿ ತಮ್ಮ ಅಜ್ಜನವರ ಫೋಟೋ ತೋರಿಸಿದರು. ನಿಮ್ಮ ತಂದೆಯವರ ಫೋಟೋ ತೋರಿಸಿ ಎಂದಾಗ, ಅವರು ಅಷ್ಟು

ಪ್ರಸಿದ್ಧ ವ್ಯಕ್ತಿಗಳಾಗಿದ್ದರೂ ಅವರ ಒಂದೇ ಒಂದು ಫೋಟೋ ಇಲ್ಲವೆಂದರು. ಫೋಟೋ ತೆಗೆಯುವ ಸಂದರ್ಭದಲ್ಲೆಲ್ಲ ಅವರು ತಪ್ಪಿಸಿಕೊಳ್ಳುತ್ತಿದ್ದರು ಎಂದರು.

"ಅವರ ಗುಣ ನಿಮಗೂ ಬಂದಿದೆ. ಎರಡು ಕಾಗದ ಬರೆದರೂ ನನ್ನ ಬಗೆಗೆ ಪುಸ್ತಕ ಬರೆಯುವುದು ಬೇಡವೆಂದೇ ಅಲ್ಲವೇ ನೀವು ಉತ್ತರ ಬರೆಯದಿದ್ದುದು" ಎಂದೆ. "ಆದರೂ ನೀವು ಬಿಡಲಿಲ್ಲವಲ್ಲ!" ಎಂದರವರು.

"ನೀವು ಸಾಹಿತ್ಯದಲ್ಲಿ ಕತೆ, ಕಾದಂಬರಿ, ಲೇಖನ, ನಾಟಕ, ಕವಿತೆಗಳನ್ನೆಲ್ಲ ಬರೆದಿದ್ದೀರಲ್ಲ. ಸಾಹಿತ್ಯ ಪ್ರಕಾರಗಳಲ್ಲಿ ನಿಮಗೆ ಯಾವುದು ಅತ್ಯಂತ ಪ್ರಿಯವಾದುದು?" ಎಂದು ನಾನು ಕವಿಯನ್ನು ಕೇಳಿದೆ. "ನನ್ನ ಮೊದಲ ಮೆಚ್ಚು ಕವಿತೆ; ನಾನು ಪ್ರಥಮತಃ ಕವಿ. ನನ್ನ ಬರೆವಣಿಗೆಗಳಲ್ಲೂ ಕವಿತೆಗಳೇ ಹೆಚ್ಚು" ಎಂದರು ಅವರು.

ಕವಿ ಪತ್ರಿಕೋದ್ಯಮಿಯೂ ಆಗಿ ಕೈಸುಟ್ಟುಕೊಂಡರು. ೧೯೬೩ರಲ್ಲಿ 'ವೀರಭೂಮಿ' ಎಂಬ ಮಾಸಿಕ ಪತ್ರಿಕೆಯನ್ನು ಆರಂಭಿಸಿದರು. ಅದು ಸಾಹಿತ್ಯಕ ಪತ್ರಿಕೆಯಾಗಿ ಮುಂದುವರಿಯಿತು. ೧೯೭೦ ಅಗಸ್ಟ್ ತಿಂಗಳ ಹೊತ್ತಿಗೆ ಅದನ್ನು ನಿಲ್ಲಿಸಬೇಕಾಯಿತು. ಅದು ನಿಂತುಹೋಗಲು ಕಾರಣ ಕೇಳಿದಾಗ ಕವಿ ನಿರ್ಲಿಪ್ತ ಮನಸ್ಸಿನಿಂದ ಹೇಳಿದರು: "ಎಲ್ಲ ಪತ್ರಿಕೆಗಳು ಯಾಕೆ ನಿಲ್ಲುತ್ತವೋ ಅದೇ ಕಾರಣ!"

ಪತ್ರಿಕೋದ್ಯಮಿಯಾಗಿ ಕವಿಗೆ ಪಶ್ಚಾತ್ತಾಪವಿಲ್ಲ. "ವೈಯಕ್ತಿಕವಾಗಿ ನನಗೆ ಬಹಳ ಒಳ್ಳೆಯ ಅನುಭವವೇ ಆಯಿತು. ಸ್ವಾಭಾವಿಕವಾಗಿ ಆಲಸಿಯಾದ ನನ್ನಿಂದ ನನ್ನ ಪತ್ರಿಕೆ ಬಲವಂತ

ವಾಗಿ ಬರೆಯಿಸಿತು. ಲೇಖನ ಕಡಮೆಯಾದಾಗ, ಪುಟ ಭರ್ತಿ ಯಾಗದಾಗ ನಾನೇ ತುಂಬಿಸಬೇಕಾಯಿತು'' ಎಂದರು.

ಶ್ರೀ ವೆಂಕಟರಾಜರಿಂದ ಅವರ ಜೀವನದ ಸ್ಥೂಲ ಪರಿಚಯವನ್ನು ಮಾಡಿಕೊಂಡೆ. ಮೊದಲು ಸೊಗಸಾದ ಹೋಳಿಗೆ ಬಂತು. ಅದನ್ನು ಧ್ವಂಸಮಾಡಿದ ಮೇಲೆ ಕೆಂದಾಳಿ ಸೀಯಾಳ ಬಂತು. ಅದು ಮುಗಿದ ಮೇಲೆ ಊಟಕ್ಕೇಳಿ ಎಂದರು. ಅವರ ಮನೆಯ ಊಟ ಮಾಡಿದಾಗ ನಮ್ಮ ಕನ್ನಡದ ಕವಿಗಳಿಗಿದ್ದರೆ ಈ ಸಮೃದ್ಧಿಯಿರಬೇಕು ಎಂದೆನ್ನಿಸಿತು. ಕಾಳಿದಾಸನ ಕಾಲದಲ್ಲಿ ಕವಿಗಳು ಒಳ್ಳೆಯ ಊಟಕ್ಕೂ ಕವಿತೆ ಬರೆಯಬೇಕಾಗಿತ್ತಂತೆ. ಅರ್ಧಶ್ಲೋಕ ಮಾಡಿ ಮುಂದುವರಿಸಲಾರದೆ ಪೇಚಾಡಿ ಕಾಳಿದಾಸನ ಬಳಿಗೆ ತಂದರಂತೆ. ಅವನು ಉತ್ತರಾರ್ಧವನ್ನು ರಚಿಸಿ ಕೊಟ್ಟನೆಂದು ಕತೆ. ಅದರಲ್ಲಿ ವರ್ಣಿತವಾದ ಊಟವೆ, ರಾಜಭೋಜನವೇ ನನಗೆ ಶ್ರೀ ವೆಂಕಟರಾಜರಲ್ಲಿ ಸಿಕ್ಕಿತು.

ಭೋಜನಂ ದೇಹಿ ರಾಜೇಂದ್ರ ಘೃತಸೂಪ ಸಮನ್ವಿತಂ
ಮಾಹಿಷಂ ಚ ಶರಚ್ಚಂದ್ರ ಚಂದ್ರಿಕಾ ಧವಲಂ ದಧಿ||

ಅಕ್ಷರಶಃ ಘೃತಸೂಪ ಸಮನ್ವಿತವಾದ ಶರಚ್ಚಂದ್ರ ಚಂದ್ರಿಕಾ ಧವಲವಾದ ಎಮ್ಮೆ ಮೊಸರೂಟವನ್ನು ಮರೆಯುವುದೆಂತು! ಈ ಸಮೃದ್ಧಿ ಕನ್ನಡದ ಎಲ್ಲ ಸಾಹಿತಿಗಳಿಗೆ ಉಂಟಾಗಲಿ ಎಂದು ಮನಸ್ಸು ಹಾರೈಸಿತು. ಅದು ಶ್ರೀ ವೆಂಕಟರಾಜರ ಭಾಗ್ಯ, ಪುಣ್ಯವೆಂದು ಕಂಡಿತು.

ಶ್ರೀ ವೆಂಕಟರಾಜರು ಈಗ ಐವತ್ತೆಂಟು ವಯಸ್ಸಿನ ವೃದ್ಧಾಪ್ಯದ ತಾರುಣ್ಯದಲ್ಲಿದ್ದಾರೆ. ಅವರ ಕ್ರಾಪು ತಲೆಯ ತುಂಬು

ಗೂದಲಿನ ಎಡೆ ಎಡೆಯಲ್ಲಿ ಅಲ್ಲಲ್ಲಿ ನರೆಗೂದಲಿನ ಸಾಲು ಗಳು ಬೆಳ್ಳಿ ಎಳೆಯಂತೆ ಹೊಳೆಯುತ್ತವೆ. ಅವರು ಹುಟ್ಟಿದ ತಾರೀಕನ್ನು ತಿಳಿಯದಿದ್ದರೆ ಇನ್ನೂ ನಲ್ವತ್ತೈದರ ಹರೆಯ ಎಂ ಬಂತಹ ಆರೋಗ್ಯವನ್ನು ಕವಿಗೆ ದೇವರು ದಯಪಾಲಿಸಿದ್ದಾನೆ. ತುಂಬು ಮನೆಯ, ತುಂಬು ಮನದ ಈ ಕವಿ ನೂರು ವಸಂತದ ತುಂಬು ಬಾಳನ್ನು ಕಾಣಲಿ ಎಂದು ಹಾರೈಸುವಂತಾಗುತ್ತದೆ. ಕನ್ನಡ ಸಾಹಿತ್ಯಕ್ಕೆ ಇನ್ನಷ್ಟು ಅವರೇ ಕೊಡ ಬಹುದಾದ ಕೃತಿ ಗಳು ಅವರಿಂದ ರಚಿತವಾಗಲಿ; ಅದರಿಂದ ನಮ್ಮ ಜಿಲ್ಲೆಗೆ, ಕನ್ನಡ ನಾಡಿಗೆ ಕೀರ್ತಿ ತರಲಿ ಎಂದು ಅವರನ್ನು ನೋಡಿದ ಯಾರಿಗಾ ದರೂ ಎನ್ನಿಸೀತು. ನನಗಂತು ಹೀಗೆ ಮನಸ್ಸು ಪಿಸುನುಡಿ ಯಿತು:

> ಕವಿಯೆಂದರೆ ಹೀಗಿರಬೇಕಯ್ಯಾ
> ಬಾಳೆಂದರೆ ಹಾಗಿರ ಬೇಕಯ್ಯಾ;
> ಮೈಮನ ಮನೆ ಎಲ್ಲ ತುಂಬು
> ಅದೆ ಬಾಳಿನ ಸುಖಕ್ಕೆಲ್ಲ ಇಂಬು.

೨

# ಕವನ ಸಂಕಲನಗಳು

ಶ್ರೀ ವೆಂಕಟರಾಜರು ಆರು ಕವನ ಸಂಕಲನಗಳನ್ನು ಬರೆದಿದ್ದಾರೆ. ಏಳನೆಯ ಕವನ ಸಂಕಲನವೊಂದು ಅಚ್ಚಿಗೆ ಸಿದ್ಧವಾಗುತ್ತಿದೆ. ಆರರಲ್ಲಿ ಒಂದು ಶತಕ ಸಂಕಲನ. ಉಳಿದ ಐದು ಕವನ ಸಂಕಲನಗಳಲ್ಲಿ ಸುಮಾರು ೨೫೪ ಕವನಗಳಿವೆ. ಇದೇನೂ ಸಣ್ಣ ಸಂಖ್ಯೆಯಲ್ಲ. ಪ್ರತಿಯೊಂದು ಕವನದ ಅಡಿಯಲ್ಲಿ ಅದನ್ನು ಬರೆದ ದಿನವನ್ನು ಗುರುತಿಸುವುದು ವೆಂಕಟರಾಜರ ವೈಶಿಷ್ಟ್ಯ.

ವೆಂಕಟರಾಜರ ಮೊದಲನೆಯ ಕವನ ಸಂಕಲನ 'ಕವಿತಾ ಕಾಮಿನಿ–ಭಾಗ ೧' ೧೯೫೭ರಲ್ಲಿ ಪ್ರಕಟಿತವಾಯಿತು. ಇದರಲ್ಲಿ ೭೫ ಕವನಗಳಿವೆ. 'ಕವಿಯ ಕಲೋಪಾಸನೆಯು ಅಕಾಲಿಕವಾದರೆ ಅಪಕ್ವವಾದರೆ ಅದು ಬಾಳಲಾರದು. ವೀಣೆಯ ಅಪಸ್ವರದಂತೆ ತಂತಿತಂತಿಗಳ ಮೇಲೆ ಧ್ವನಿಗುಡಲಾರದು. ಅಂತಹ ಕವಿತೆಯು ತೀರಿ ಹೋದರೆ ಯಾರಿಗೂ ನಷ್ಟವಿಲ್ಲ. ಅದು ತೀರಿ ಹೋದರೇನೇ ಸಾಹಿತ್ಯವು ಬೆಳೆಯುವುದು. ಕಾರಣ ಅದು ಕಾವ್ಯದ ಕಲೆಯಲ್ಲ — ಕಳಂಕ! ವರ್ಷ ಹದಿನಾರರಂದು ನನ್ನ ಕವಿತಾ ಕಾಮಿನಿ ನೆರೆದು ಬಂದು,

> "ನಾರಿಯೇ ತಾನಾಗಿ ಬಾರೆಂದು ಕರೆಯುತಿರೆ
> ಸಾರದಿಹ ಧೀರನವನಾರೊ ಜಗದಿ?'

ಎಂದು ಕರೆದು ಗುಣುಗುಟ್ಟಿರುವಳು. ಅದಷ್ಟೇ ಅವಳ ಕರೆ. ಆ ಕರೆಯು ಇನ್ನೂ ಕೊನೆಗಂಡಿಲ್ಲ" ಎಂದು ಮುನ್ನುಡಿದಿದ್ದಾರೆ.

"ಮೆಲಿತೋ ಮೆಲ್ಲಿತು ಮಾನಸಕಾಗಿ
ಮಿಡಿಯುವ ಬೀಣೆಯ ಹರುಷ
ಹೊಸತೋ ಹೊಸತು ಹೃದ್ಗತವಾಗಿ
ಸುಂದರ ಸತ್ಯ ವಿಕಾಸ"

ಎಂಬುದು ಕವಿಯ ಆಂತರ್ಯದ ಬಯಕೆ.

ಕವಿಯು ಮೊದಲ ಕವನವನ್ನು ೧೬-೬-೩೦ರಂದು ಬರೆದರು. ಅವರಲ್ಲಿ ಕನ್ನಡ ತಾಯಿಗೆ ತಮ್ಮ ಭಕ್ತಿ-ಅಂಜಲಿಯನ್ನು ನಿವೇದಿಸಿದ್ದರು. ಕಮನೀಯ ಗುಣಗಾನವೆಂಬ ಕೊಳದೊಳು ಮುಳುಗಿ ವಿಮಲಭಕ್ತಿಯೊಳುಟ್ಟು ನವಿರುಡೆಯನು ಕವನದ ಕಿರಿಯ ಕಾಣಿಕೆಯನ್ನು ಅರ್ಪಿಸಿದರು. 'ಏಕೆ? ' ಎಂಬ ಕವನದಲ್ಲಿ ಕವಿತಾಕಾಮಿನಿಯನ್ನು ಪ್ರಶ್ನಿಸುತ್ತಾರೆ:

ಏನು ಮಾಟವಿದೇನು? ನಿನ್ನ ರೂಪವನೆನ್ನ
ಬಗೆದೆರೆಯೊಳನುದಿನಂ ನೇಹಮಸಿಯಿಂದೆ
ಕಡೆಗಣ್ಣ ನೋಟವೆಂಬೆಸೆವ ಕುಂಚವ ತಳೆದು
ನಗುನಗುತೆ ಚಿತ್ರಿಸುತಲಿರುವೆ ನೀನೇಕೆ ?

'ಹಳ್ಳಿಗನ ಹಾಡು' ಎಂಬ ಕವನದಲ್ಲಿ ಧನಿಯ ಹಾಡಿಗೆ ನಾಯಿ ತನ್ನ ಬಾಲದಿಂದ ತಾಳಗುಟ್ಟುವುದನ್ನು ಕವಿ ಕಾಣುತ್ತಾರೆ. ಕೊಳಲಿನ ಇನಿದನಿ ಕವಿಗೆ ಮರುಭೂಮಿಯಲ್ಲಿ ಅಲೆದಾಡುವಾಗ ಕಿವಿಗಳನ್ನು ಅರಳಿಸುವ ಹೊನಲಿನ ದನಿಯೆಂಬಂತೆ ಕೇಳಿಸುತ್ತದೆ. 'ಕೋಗಿಲೆ' ಮಾಮರದ ಕೆಂದಳಿರ ತೂಗುಯ್ಯಾಲೆಯಲ್ಲಿ ಒರಗಿ ಜೀವಿಗಳ ಬಗೆವನೆಯ ನೋವಿನುರಿಯನ್ನು ತವಿಸುವ ಕಬ್ಬಿಗನಾಗಿ ಕಾಣಿಸುತ್ತದೆ. 'ರಣರಂಗ' ಕವಿಗೆ 'ವೀರರ್ಕಳೆದೆಯ ಕಲಿತನದೊಂದು ಹೆಚ್ಚಳವನೊರೆಯಲೆಂದಿರಿಸಿರುವ ಮಸೆಗಲ್ಲು' ಎಂಬಂತೆ ತೋರುತ್ತದೆ.

ಅಳಿಯಾಸೆಗೆ ನೆಳಲೀಯಲು
ನಿನ್ನೆದೆ ಕರೆಕರೆವಾಗ
ತಿಳಿಬಗೆಯೊಳು ತಳವರಿಯದ
ನೇಹದ ಹೊನಲೊಗೆವಾಗ
ಕಿರುಲಜ್ಜೆಯು ತೆರೆಗಳೆಯುತೆ
ಬಗೆಬಾಂದಳವೆಸೆವಾಗ
ಚೆಂದುಟಿಯೊಳು ದರಹಾಸದ
ಮುಂಬಿಸಿಲದು ಬೆರೆವಾಗ
ಬರುವೆನಿದೋ
ನಿನ್ನೆಡೆಗೆ!

ಎಂದು ಕವಿ ಪ್ರಿಯೆಗೆ ಹೇಳುತ್ತಾರೆ. 'ವಿಮರ್ಶಕ' ಎಂಬ ಕವಿತೆಯಲ್ಲಿ,

ತಲೆಯೆತ್ತುವ ಮೀಂಗಳನೋರಂತೆ
ಮುರಿದಿಕ್ಕುತಲಿಹ ಬಕದಂತೆ
ಹೊಂಚುತೆ ಕುಳಿತಿರುವನು ಕಾದು
ಇವನೆ ವಿಮರ್ಶಕನಿದೊ ನೋಡು

ಎಂದು ಒಬ್ಬ ವಿಮರ್ಶಕನನ್ನು ಗುರುತಿಸಿದರೆ, ಇನ್ನೊಬ್ಬ ಸಹೃದಯನನ್ನೂ ಗುರುತಿಸಿದ್ದಾರೆ:

ಇವನೊಲಿದೆದೆಯಳುಕದೆ ಕೈಗುಡಲು
ಕಲ್ಲೊಳೆ ಹರಿವುದು ರಸಗಳ ಹೊನಲು!

ಕವಿಯು ದೊರೆಯು ಬರುವನೆಂದು ಮನೆಯನ್ನು ಸಿಂಗರಿಸಿದ ರಂತೆ:

ಬಡವನಾದರೇನು ಹೃದಯದೊಲವು ಕಿರಿಯದೆ?
ಸೊಬಗಿನಲರ ಸುಂದರೆತ್ತಿ
ತಳಿರ ಮಾಲೆಗಳನು ಸುತ್ತಿ

ಮುರುಕು ಮನೆಗೆ ಪ್ರಕೃತಿಯೊಡಲ ಮಿರುಗನಿತ್ತಿನು.
ಹಾಗೆ ದೊರೆಯಾಗಿ ಬಂದವನು ಬೇರಾರೂ ಅಲ್ಲ.

ತಿರುಕನೊಬ್ಬನಿದಿರು ಬಂದು ನಗುತೆ ನಿಂದನು
ಬರುವೆನೆಂದ ನಾಡಿನರಸು ನಾನೆ ಎಂದನು!

ಕವಿಯು ಹರೆಯವೊಂದಿರುವಾಗ ಕೆಳೆಯರ ಕೂಟಕೇನು ಕೊರತೆ, ಅದರ ಜತೆಯಲ್ಲಿ ಸಿರಿಯೂ ಸೇರಿದರೆ ಮುಗಿಯಿತು ಎನ್ನುತ್ತಾರೆ. ಅದೇ ಹರೆಯ ಸಿರಿ ಇಳಿದಾಗ ಪಾಪದೊರತೆ ಮಾತ್ರ ಬೆನ್ನ ಹಿಂದಿನಿಂದ ಬಂದೀತು ಎನ್ನುತ್ತಾರೆ.

ಘೋರವಹ ಸಂಸಾರ ಸಾಗರವನುತ್ತರಿಸ-
ಲಾರಾರ ಹರಿಗೋಲಿನಾಸರಂಗೊಳಲಹುದೆ?

ಎಂದು ನಂಬುತ್ತಾರೆ.

ಹರೆಯದ ಹಂಬಲಕ್ಕಾಗಿ ಕವಿ ಹೀಗೆ ಕಾಯುತ್ತಾರೆ:

ಆಸೆ ಗುಡಿಗಳನೆತ್ತಿ
ದುಗುಡದೆರೆಗಳನೊತ್ತಿ
ಬಾಳ್ವೆ ಹಡಗನು ಬಿಗಿದು ಕಾದಿರುವೆನು
ನಗೆಯ ಬೆಳಕನು ಬೀರಿ
ಸೊಗದ ದಾರಿಯ ತೋರಿ
ಮುನ್ನಡೆಸಿ ನಲಿವ ಸಖ ಬಾರನೇನು?

ಬಾಳಿನಲ್ಲಿ ಸ್ನೇಹ, ಪ್ರೇಮ ಎಂಬುದೊಂದು ಗೂಡುದೀಪ ಎಂದು ಕವಿ ಸೊಗಸಾಗಿ ಹೇಳಿದ್ದಾರೆ:

ತೀರದಾಸೆಯುಸಿರ ನೇಣು
ಜೀವಿಗಳನು ಮೋಲಕೆಳೆದು

ನೇಹದೊಂದು ಕಿಡಿಯನೂಡಿ
ಗೂಡ ದೀಪ ಗೈವುದು!

ಮನದನ್ನೆಯು ಸುಯ್ಯೆಲರಿನಲ್ಲಿ ಬಾಳಿನ ಬಡಿವಾರವನ್ನು ಕಾಣು ತ್ತಾರೆ. ಅವಳ ಕುಡಿನೋಟದ ನುಣ್ಗದಿರೊಳೆ ಭಾವಗಳವತಾರ ವಾಗುವುದನ್ನು ಅನುಭವಿಸುತ್ತಾರೆ.

ಈ ಕಲ್ಪನೆಯ ಸ್ವಾರಸ್ಯವನ್ನು ಸವಿಯಿರಿ:

ಮಿಂಚೊಂದು
ಮಿನುಗುತಿತ್ತು;
ದೆಸೆವೆಣ್ಣ
ಕುಂಚವೆನೆ
ಕುಣಿಯುತಿತ್ತು!

ಈ ಪ್ರಕೃತಿ ಸೌಂದರ್ಯದ ಪ್ರಜ್ಞೆಯನ್ನು ನೋಡಿ:

ಕಾವನೊಸಗೆಯ ಪದಪು ಮೈವೆತ್ತು ಮೊರೆವಂತೆ
ಕಿರುದೆರೆಯ ತೊರೆಯೊಂದು ಹರಿಯುತಿತ್ತು
ತೊರೆಯ ಮೆಲುದನಿಗೆ ಮೈಮರೆದು ಮಲಗಿರುವಂತೆ
ಬಯಲೊಂದು ಕೆಲದೆ ಕಂಗೊಳಿಸುತಿತ್ತು!

ಪ್ರಣಯಜೀವನವೆಲ್ಲ ಕವಿಗೆ ಯಾವುದೋ ಒಂದು ಗಳಿಗೆ ಯಲ್ಲಿ 'ಸಾವಿನ ಗುಡಿಯಲಿ ಜೀವದ ಜಾಗಟೆ ಬಾರಿಸಿ ಬಳಲಿ ಹುದು?' ಎಂದು ಸಂದಿಗ್ಧವಾಗಿ ತೋರುತ್ತದೆ. ಕವಿಯ 'ಆವಾ ಹನೆ' ಎಂಬ ಕವನ ತುಂಬ ಸುಂದರವಾಗಿದೆ. ಪ್ರಕೃತಿಯ ವಿಧ ವಿಧ ಕ್ರಿಯೆಗಳು ಕವಿಗೆ ಕಾಣಿಸುವ ರೀತಿಯಲ್ಲಿ ಸೊಗಸಿದೆ.

ಮುಂಜಾವದುದಯದಲಿ ಕಮ್ಮಲರ ಪಿಸುಮಾತು
ಭೃಂಗ ಜೀವನವನೆಚ್ಚರಿಸುವಂತೆ

ಮಂಜು ಮಧುಮಾಸದಲಿ ಮೆಲ್ಲೆಲರ ಮೈಸೋಂಕು
ಗಿರಿದರಿಯ ಬಯಲಿದೆಯನುಲಿಸುವಂತೆ
ಬಾ ಎನ್ನ ಬಯಲುಗುಡಿಗೆ!

ಕವಿದ ಕಟ್ಟಿರುಳಿನಲಿ ಹಡಗುದೆಸೆಗೆಡುತಿರಲು
ಜ್ಯೋತಿಯೊಂದೊಗೆದು ತಡವರಿಸುವಂತೆ
ಸುಗಿದ ಬಾಳಿನ ಮೊಗಕೆ ತನಿಸೊಗದ ಕನಸೊಂದು
ಸವಿದೋರಿ ಸಂತಸಂಬರಿಸುವಂತೆ
ಬಾ ಎನ್ನ ಬಯಲುಗುಡಿಗೆ !

ಜಾಹ್ನವಿಯ ಕೈದೆರೆಯ ಸುಳಿಯ ಸಂಗತಿಯೊಂದು
ಕೂಲತಲ್ಪದ ತೆರಪನರಸುವಂತೆ
ಮೌನ ಭಾವದ ಬೆರಳು ಜೀವರಾಗವನಲುಕಿ
ಕಾವ್ಯಕಲ್ಪನೆಯ ಕುಡಿವೆರಸುವಂತೆ
ಬಾ ಎನ್ನ ಬಯಲುಗುಡಿಗೆ !

ಕವಿ ಜಗತ್ತಿನ ಜೀವ ಕೋಟಿಯನ್ನೂ ಪ್ರಶ್ನಿಸುತ್ತಾರೆ:

ಅರಿವಿರೇನನು? ಮರೆವಿರೇನನು?
ಗಳಿಗೆ ಬಾಳಿನ ಬಳಿಯಲಿ?
ಕೊಳುವಿರೇನನು? ಕಳೆವಿರೇನನು?
ಹುಟ್ಟು ಸಾವಿನ ಸುಳಿಯಲಿ?

'ಉಪಾಸನೆ' ಎಂಬ ಕವನದಲ್ಲಿ ಕವಿ ಯಾವ ಪೂಜೆಯನ್ನು ತನ್ನ ಒಡೆಯನಿಗೆ ಸಲ್ಲಿಸಲಿ ಎಂದು ಕೇಳುತ್ತಾರೆ. ಬಾಳೇ ಅರಳಿ ಬಿರಿದ ಹೂವಾಗಿದೆ. ತೋಳೇ ತಳಿರ ತೋರಣವಾಗಿದೆ. ಮೌನವೇ ಮಂತ್ರವಾಗಿದೆ. ಯೋಗವೇ ಆರತಿಯನ್ನೆತ್ತಿದೆ. ಕಟ್ಟ ಕಡೆಗೆ ಪ್ರಾಣವೇ ಪೂಜೆಯಾಗಿ ಅರ್ಪಿತವಾಗಿದೆ:

ಬಾಳ ತೆರೆ ತೆರೆದಾಗ ಭಾವಿಸುವ ಹದನಿಲ್ಲ
ಪ್ರಾಣ ಪೂಜೆಯನೆಸಗಿ ನೆರೆವೆನೆನ್ನೊಡೆಯ!

"ತುಂಬಿದೊಲುಮೆಯ ತೈಲ ತೀರಲುಂಟೆ" ಎಂಬ ಕವಿಯ ಕವಿತಾಕಾಮಿನಿ ಹೀಗೆ ಕವಿಯನ್ನು ಕನಸಿನಲ್ಲಿ ಬಂದು ಕುಣಿಯಲು ಕರೆಯುವಳಂತೆ. ಇರುಳೊತ್ತಿದ ಕಣ್ಣೆವೆಗಳನ್ನು ಎತ್ತಿ ಕುಣಿಯಲು ಕರೆಯುವಳಂತೆ; ಕರೆದು ಈ ರೀತಿ ಹೇಳಿದಂತಾಗುತ್ತದೆ:

ಬೆಳಕಿನ ಬಿಜ್ಜೆಯನರಿಯಲು ತೂಗಿದ
ಕತ್ತಲೆ ಹಿನ್ನೆಲೆಯಂತೆ
ಸತ್ಯದ ಸೊಡರಿನ ಹಿಂಬದಿ ಸರಿದು
ಕೂಡಿದೆ ಕನಸಿನ ಸಂತೆ
ಚೆಲುವಿಕೆಯೊಂದೆ ವಿಶ್ವದ ಮುಂದೆ
ನೋಡುವ ನೋಟವು ವಿವಿಧ
ಹಾಸಿದ ಹಾಸು ಹೊಡಿದ ಹೊರಸು
ಇದು ಕಲೆಯೀವ ಹಸಾದ.

ಕವಿ ತಮ್ಮ ಎರಡನೆಯ ಕವನ ಸಂಕಲನ "ಕವಿತಾ ಕಾಮಿನಿ— ಭಾಗ ೨"ನ್ನು ೧೯೫೭ರಲ್ಲಿ ಪ್ರಕಟಿಸಿದರು. ಇದರಲ್ಲಿ ೬೦ ಕವನಗಳಿವೆ. ಹಲವು ದಿನಗಳ ಮೇಲೆ ಪುನರಾಗಮನವಾದ ಕವಿತಾಕಾಮಿನಿಯನ್ನು ಕವಿಯೇ ಸ್ವಾಗತಿಸುತ್ತಾರೆ. ಬಹು ದಿನಗಳ ಉಪವಾಸ ಮುಗಿದ ಬಳಿಕ ಬಂದ ಹೊಸತು ಹಬ್ಬದ ಹಸೆಯಾಗುತ್ತದಂತೆ. ತಿಂಗಳ ಬೆಳಕು ಕವಿಗೆ "ಭುವಿಯ ಬಾನಿನೊಡನಾಟಕೆ ಹೊಸತು ಸೇತು ತೂಗಿತಲ್ಲ!" ಎಂಬಂತೆ ಕಾಣುತ್ತದೆ. ಆ ಚಂದ್ರ ಕವಿಗೆ ತೋರುವ ರೀತಿ ಮೆಚ್ಚುವಂತಿದೆ:

ವಿಶ್ವಮಂದಿರದಲಿ ಚಾರುಚಂದ್ರ ಬಿಂಬ
ಮುಗಿಲ ಮರೆಯನುಳಿದು ನಗುವ ಸಮ್ಮತಿ

ಸೊಬಗಿನಿರುಳ ರಾಣಿ ಬಾನತಳಿಗೆವಿಡಿದು
ಮಧುರಮಿಲನಕೊಲಿದ ಮಂಗಳಾರತಿ!

ಸುತ್ತಲೂ ಮುಂಜಾವದ ಕುಡಿನೋಟದ ಸಿರಿ ಹರಿದಿದೆ. ಆ ಕಡೆಯಲ್ಲಿ ಈ ಕಡೆಯಲ್ಲಿ ತುಂಬಿದೆ ನವಗೀತಿ, ದೆಸೆದೆಸೆಯಲ್ಲಿ ಬಾವನ್ನದ ಸಿರಿ ಚೆಲ್ಲಿದ ರೀತಿ! ಕಲ್ಪದ ಕವನ ಮೂಡಬೇಕಾದರೆ ಕಂಬನಿಯಲ್ಲಿ ಬರೆಯಬೇಕಂತೆ. ಕವಿ ತನ್ನ ಮತಿದರ್ಪಣದಲ್ಲಿ ವಿಶ್ವವನ್ನೇ ಕಾಣುವಂತೆ ಪ್ರಣಯಜೀವನದಲ್ಲಿ ಪ್ರಿಯ 'ಮಿದುಮಿದುಗದಪಿನ ಕನ್ನಡಿಯಲಿ ಮೂಜಗವನೆ ಕಂಡಿರಬೇಕು; ಪ್ರೀತಿಯು ಸೊಗಸೊಗದಾಟದ ಸೆರೆಯಲಿ ವಿಶ್ವವೆ ಬಿಗಿದಿರಬೇಕು.' ಬಿಸಿಲು-ಮಳೆ ಒಟ್ಟಿಗೆ ಬಂದ ಸೋಗು 'ಹೊಸತು ಸೂಳೆಯಂತಿದೆ; ಮುನಿಸು ನಗೆ ಬೆರೆತ ಬಿಂಕ ಸೊಗಸು ಚೆಲ್ಲಿದಂತಿದೆ' ಮಾಗಿ ಸುಗ್ಗಿ ಕೈಕೈ ಹಿಡಿದು ಕುಣಿದು ಕೂಡಿದಂತಿದೆಯಂತೆ. 'ಕಣ್ಣ ಹನಿ ಹರುಷಕಾಗಿ ಒಸರು ಸೂಸಿದಂತಿದೆ' ಇಳೆ ಇದರ ಸೊಕ್ಕನ್ನು ಸವಿದು ಮಲಗಿದಂತಿದೆಯಂತೆ. 'ಹಾರಿಹೋದ ಹಕ್ಕಿ' ಕವಿಗೆ ಕಾಣಿಸಿರುವುದು ರಮ್ಯವಾಗಿದೆ:

ಇರುಳ ದೇವಿ ಮುಗುಳೆ ಮುಗುಳೆ
ಕವಲು ಮಿಂಚು ಬಳಪವಿಡಿದು
ಬಾನ ಹಲಗೆಯತ್ತ ಬರೆದ
ಬರಹವರಿಯಲಿಲ್ಲ!

'ಕವಿ-ಕಲ್ಪನೆ' ಎಂಬ ಕವನದಲ್ಲಿ ಅವರ ಪರಸ್ಪರ ಸಂಬಂಧವನ್ನು ಕವಿ ಚೆನ್ನಾಗಿ ಗುರುತಿಸಿದ್ದಾರೆ:

ಕುಕಿಲ್ ತೊದಲುವ ನಸುಕಿಲಿ ನಾನು
ಹರಿಯುವೆನು ಹಾಲಾಗಿ

ಮುಗಿಲ್ ತೇಲುವ ಬಾನಿಲಿ ನೀನು
ಕಾಣುತಿಹೆ ಕೆನೆಯಾಗಿ

× × ×

ಹೊನಲ್ ಸೂಸಿದ ತಣ್ಪಿಲಿ ನಾನು
ತುಳುಕುವೆನು ತೆರೆಯಾಗಿ
ಹಸುರ್ ಹಾಸಿದ ಬಯಲಲಿ ನೀನು
ಬಳುಕುತಿಹೆ ತೆನೆಯಾಗಿ

ಇಲ್ಲಿಯ ಕಲ್ಪನೆಯ ಶ್ರೀಮಂತಿಕೆ ಮೆಚ್ಚುವಂತಿದೆ:

ಗಿರಿದರಿಯ ಕಿರುಮೊಚ್ಚ ಕಾಡ ಕಮರಿಯನುಳಿದು
ಬಯಲ ಪೊರೆವಾರದಲಿ ಮೈನೆರೆದಿದೆ
ಇಕ್ಕೆಲದ ಹೊಂಬಾಳೆ ಹಣ್ಣು ಹರಕೆಯ ಹೊತ್ತು
ಮೊದಲ ಮನ್ನಣೆಗಾಗಿ ತಲೆಬಾಗಿದೆ.

'ಜೀವನ' ಹೀಗಿರಬೇಕಂತೆ:

ಅಳಿಯಾಗಿ ನಲಿದಾಡಿ ಗಿಳಿಯಾಗಿ ಮಾತಾಡಿ
ಹೂವಾಗಿ ಹೃದಯ ಹಗುರಾಗಬೇಕು
ಮುಗಿಲಾಗಿ ಮೇಲೇರಿ ಗುಡುಗಾಗಿ ಗಜಗಜರಿ
ತಿಳಿತನದ ಸೋರುಮಳೆ ಸುರಿಯಬೇಕು.

ಕವಿಯ ಕಣ್ಣಿಗೆ ಕತ್ತಲಾದುದು ಹೀಗೆ:

ಕತ್ತಲಾಯಿತೆಂದು ಹಕ್ಕಿ ಸಾರಿದಾಗ
ಕಲ್ಪವೆಲ್ಲ ಬಾಗಿಲಿಕ್ಕಿ ಕುಳಿತಿದೆ!

'ಹೋಳಿಹುಣ್ಣಿಮೆ'ಯಂದು ಪ್ರಿಯೆಯಲ್ಲಿ ವಿಶ್ವದ ಚರಿತೆಯನ್ನು ಓದುವುದು ಕವಿಗೆ ಸಾಧ್ಯವಾದುದನ್ನು ನೋಡಿ :

ಆಹಾ ನೂಪುರವಲುಗಿದೆ! ಗುಣುಗುಣು
ಗಾನವೆ ಕಲ್ಪದ ಕವಿತೆ
ಆಹಾ ಸೊಗಸಿನ ಸಿರಿಮುಡಿ ಕಂಡಿದೆ
ಬರೆದಿದೆ ವಿಶ್ವದ ಚರಿತೆ

ಬಿಳಿಮುಗಿಲು ತೇಲಿಬಂದುದರ ಸುಂದರ ವರ್ಣನೆಯನ್ನು ಕೇಳಿ:

ಮೊದಲ ಮೆಲ್ಲಡಿಯು ಬೆಳ್ಮುಗಿಲು ತೇಲುತ ಬಂತು
ಕಲ್ಪನೆಗಳೇಕಾಂತಕೊದಗಿದಂತೆ
ಆ ಕಡೆಗೆ ಸೆಳೆಮಿಂಚ ಸೊಡರ ಪಂಜನು ಹಿಡಿದು
ಮನ್ಮಥನ ಮನೆಯು ಮುತ್ತೈದೆಯಂತೆ!

ಗಾಂಧೀಜಿ ಹುತಾತ್ಮರಾದುದನ್ನು ಕೇಳಿ ಈ ಕವಿಚೇತನ ನೊಂದು 'ದುರಂತ' ಎಂಬ ಕವನ ಬರೆದಿದೆ. ಆ ದುರಂತದ ಲಕ್ಷಣವನ್ನು ಅವರ ಮಾತಿನಿಂದಲೇ ತಿಳಿದುಕೊಳ್ಳಿ :

ಕಾಮಧೇನುವು ಬರಡು. ಕಲ್ಪಲತೆ
ಸುಟ್ಟುಳಿದ ಹಿಡಿಬೂದಿ. ಸೊದೆಯುಗಂಗಳಬರಿದು
ಬರಿದೊ ಬ್ರಹ್ಮಾಂಡವಿದು. ಪಾಪಲೋಕದ ಪೂರ್ಣ
ಯಾತನೆಯ ಪಂಜರವೊ! ಇದರ ತಾಪವನಳಿಸೆ
ದಿವ್ಯಗಂಗೆಯು ಧವಳಕೀರ್ತಿ ಕೈಸಾಲದಿದೆ.

× × ×

ಹಾ ರಾಮ! ಆ ದಯಾಮೂರ್ತಿ ಕೆಡೆದಿತ್ತಲ್ಲಿ!
ಜೀವಕೋಟಿಯು ಪಾಪ ಭಾರವನು ಸಹಿಸಿದಾ
ಸಹನೆ ಕಂಡಿತ್ತಲ್ಲಿ!

'ಚೈತನ್ಯದ ತೆರೆಹೊಯ್ದಿದೆ ತಾರುಣ್ಯದ ಶರಧಿ' ಎಂಬ ಕವಿಯು ಚೇತನ ಶ್ರೀಮಂತವಲ್ಲವೆಂದು ಯಾರು ಹೇಳಿಯಾರು? 'ಗೋಮಟ ಶತಕ' ಎಂಬ ಕವಿತೆಯಲ್ಲಿ ಕವಿಯು ಕೆಲವು ಎತ್ತರದ ಕಲ್ಪನೆಗಳನ್ನು ಕಾಣಬಹುದು. ಗೋಮಟ ತಮಗೆ ಹೇಗೆ ಕಂಡ ಎಂಬುದನ್ನು ಕವಿ ತಮ್ಮದೇ ಆದ ರೀತಿಯಲ್ಲಿ ಬಣ್ಣಿಸಿದ್ದಾರೆ:

..............................ದೃಪ್ತ
ಭೀಮ ಸುಂದರನೊಬ್ಬನಜಾನುಬಾಹು ಬಲ
ಭದ್ರಭುಜಬಲನೆನಿಸಿ ಕೈಕಲೆತು ಕಾದಿ ವೈ
ಸೋತು ನಿಂದಿಹನೇನು?

* * *

ಯೋಗ ಪಾತಾಳದಲಿ ಬಿದ್ದ ಬಲಿಯನು ಕಂಡು
ದಾನದಪಹಾಸ್ಯಕೆಂದಿಟ್ಟ ತ್ರೈವಿಕ್ರಮವೊ?

* * *

..............................ಬಾಲರೊಳು
ಬಾಲನಿವನೇನೊ– ಮಾನುಷರೊಳತಿಮಾನುಷಂ
ಜೈನ ಮನಸಾಗರದ ಮಥಿತಾರ್ಥ ಬೋಧೆಯಲಿ
ನಿಂತ ನಿಶ್ಚಲಧರ್ಮ ಮೂಲ ಮಾನಸ್ತಂಭ!

ಕವಿ 'ಸಮಾಜ ಸೀತೆಗೆ' ಎಂಬ ಕವನದಲ್ಲಿ ತಮ್ಮ ಸ್ವ-ಇಚ್ಛೆಯನ್ನು ಪ್ರಕಟಿಸಿದ್ದಾರೆ. ಕವಿ ನಿರಂಕುಶಮತಿ; ಅವನು ಯಾರ ಸೂತ್ರಕ್ಕೂ ಕೊರಳೊಡ್ಡುವವನಲ್ಲ ಎಂಬುದನ್ನು ಚೆನ್ನಾಗಿ ಹೇಳಿದ್ದಾರೆ:

ಆರೊ ಖಟ್ಟಲನಿಟ್ಟು ಸುರಿದ ತಂಗಳಕಾಗಿ
ಬಾಯ್ದೆರೆದು ಜೊಲ್ಸುರಿದು ಹಸಿದು ನಿಂದವನಲ್ಲ
ಆರೊ ಹಣತೆಯನಿಟ್ಟು ಹೊಸೆದ ಸೊಡರಿನ ಸುತ್ತ
ಸುರಿಯಲೆಣ್ಣೆಯ ಕುಡಿಕೆ ಹೊತ್ತು ತಂದವನಲ್ಲ.

ಯುಗಾದಿಯನ್ನು ಕವಿ 'ಬಿದಿಯ ಡೊಂಬರಾಟಕಾಗಿ ತಿರೆಯು ನಟ್ಟ ತಿರುಗಣೆ!' ಎಂದಿದ್ದಾರೆ. ಕನ್ನಡ ತಾಯಿಯನ್ನು ಕವಿ ಹೀಗೆ ಕಂಡಿದ್ದಾರೆ:

ಅಲ್ಲಿ ಗೋದಾವರಿಯ ಬಚ್ಚಲಲಿ ಮೈಮಿಂದು
ಜಳಕಗೊಂಡಾಡಿರುವ ಕನ್ನಡದ ಕೀರ್ತಿ!
ಇಲ್ಲಿ ಕಾವೇರಿಯಲಿ ತಿಂದು ಕೈತೊಳೆದಿಹಳು
ಕನ್ನಡದ ಮನೆತನದ ಗೌರವದ ಗರತಿ!

ಶ್ರೀ ವೆಂಕಟರಾಜರ ಮೂರನೆಯ ಕವನ ಸಂಕಲನ "ಮಾನಸಗಂಗೆ" ೧೯೬೦ರಲ್ಲಿ ಪ್ರಕಟವಾಯಿತು. ಮುನ್ನುಡಿಯಲ್ಲಿ ಕವಿ 'ಕನ್ನಡ ಕುಲರಸಿಕರ ರಸಾಸ್ವಾದನೆಗಾಗಿ ಮಾನಸಗಂಗೆ ಹರಿದು ಬಂದಿದ್ದಾಳೆ; ಇದು ನನ್ನ ಮಾನಸಗಂಗೆ ಮಾತ್ರವಲ್ಲ–ಜನತೆಯ ಮಾನಸಗಂಗೆ, ನಾಡಿನ ಮಾನಸಗಂಗೆ'' ಎಂದಿದ್ದಾರೆ. ಇದರಲ್ಲಿ ೫೯ ಕವನಗಳಿವೆ. ಇಲ್ಲಿನ ಹೆಚ್ಚಿನ ಕವನಗಳು ಶೃಂಗಾರರಸ ಪರಿಪ್ಲಾವಿತವಾಗಿವೆ. ಉಡುಪಿ ಕೃಷ್ಣನಲ್ಲಿ ಕವಿ, 'ಹಾಲು ಹೊಯ್ದಂತಿರುವ ನಗೆಯಲಿ ತೇಲಿತೋ ತತ್ವಾಂಗಣ' ಎಂದು ಕಾಣುತ್ತಾರೆ. ಕವಿ ಬರೆದ 'ಸೋಮಾರಿಯ ಹಾಡು' ಚೆನ್ನಾಗಿದೆ:

ಮುಂಗಾರಿನ ಬಾನಂಚಿನೊಳುರಿದಿದೆ
ತಟಪಟ ಮಳೆಯು ಹನಿ
ಸಿಂಗಾರದ ಸಿರಿಮಂಚದೊಳದುರಿದೆ
ಪಿಚಿ ಪಿಚಿ ತುಟಿಯು ದನಿ!

ಅನುದಿನ ಯೋಚನೆ–ಕಂಬಳಿ ಸೇರುವ
ಮುದುಕನ ಪೇಚಾಟ
ಅನುನಯ ಯಾಚನೆ–ಬೆಂಬಳಿ ಸಾರುವ
ಹರೆಯದ ಹೊಯ್ದಾಟ!

× × ×

ಹಾಗೋ ಹೀಗೋ ಹೆಡೆತಲೆಯೆತ್ತಿದೆ
ಹರುಷದ ಹೊಂಬಾಳೆ!

"ಶಿಶಿರಗಾನ"ದಲ್ಲಿ ಕವಿ ಶಿಶಿರ 'ನಖಶಿಖಾಂತದ ಬಿಸಿಯುರಕುತದ ಬೋಗುಣಿಯು ಬಾಯೀಂಟುತ'ಬರುವುದನ್ನು ಅನುಭವಿಸಿದ್ದಾರೆ. 'ಚಳಿಯು ಭಾರಕೆ ಹೊದೆದ ಹಚ್ಚಡ ಹಗುರ ಹಪ್ಪಳವಾಗಿದೆ' ಯಂತೆ. ಕುಲನಾರಿ ಮನೆಯನ್ನು ಸೇರಿದಾಗ ಬಾಳಿನ ಉದಯ ರಾಗವಾಯಿತಂತೆ:

ಕುಲನಾರಿ ಕಲ್ಯಾಣಿ ಮನ್ಮನೋರಮಣಿ ಮನೆ
ಮುತ್ತೈದೆ ಬಂದಳಾಗ
ಕಲಶ ಕುಚವೇದಿಕೆಯ ತಳಿರ ತುಟಿ ಚೆಲುವಿಕೆಯ
ಮಾಂಗಲ್ಯದುದಯರಾಗ!

× × ×

ದೇವಲೋಕವು ಕೊಳಕು ದೇವಲೋಕವು ಸಾಕು
ದೇವ ಸತಿಯರು ಸುಮ್ಮನೆ
ನಾವಿಬ್ಬರೇ ಕೂಡಿ ಕಲಿತು ಕೊಂಡಾಟದಲಿ
ಬೆರೆತ ಬಾಳೇ ಕಮ್ಮನೆ!

ಎಂದು ಕವಿ 'ಸುರಲೋಕವೆಲ್ಲ ಸುಳ್ಳು' ಎಂಬ ತೀರ್ಮಾನಕ್ಕೆ ಬರುವಂತಾಗುತ್ತದೆ. 'ಆಕಾಶ ಪುರಾಣ' ಎಂಬ ಕವನದಲ್ಲಿ ಈ ಸುಂದರ ಕಲ್ಪನೆಯನ್ನು ಮಾಡಿದ್ದಾರೆ:

ಬಾನು ಪಾನಭೂಮಿ—ಮೋಡವೆಂಬ ಮಧುಮಹಾಘಟ
ತಾನೆ ತಾನೆ ಚಿಮ್ಮುತಿರುವ ಮಿಂಚಿನ ಮಧುರಾಮೃತ

ಸಗ್ಗದಲ್ಲಿ ತಾವೆ ಕುಡಿದು
ಹಿಗ್ಗಿ ಹಿಗ್ಗಿ ದೇವರಾಗಿ

ಕೆಳಗೆ ಸುರಿಸಿದೆರಡು ತುಂತುರಾಯ್ತು ಜಗತ್ಪಾವನ
ಮೇಲು ಕೀಳು ಭಾವವಿರದ ಸಂಸಾರದ ಜೀವನ

ಸ್ವರ್ಗದಲ್ಲಿ ಸ್ವಾರಸ್ಯವಿಲ್ಲ ಎಂಬುದನ್ನು ಕವಿ ಒಂದು ನಾಯಿಯ ಮೂಲಕ ಹೇಳಿಸಿದ್ದಾರೆ. ಒಂದು ನಾಯಿ ನರಕದಿಂದ ಸ್ವರ್ಗವನ್ನು ಇಣುಕಿತಂತೆ. ಸ್ವಾರಸ್ಯವಿಲ್ಲದಿರುವುದನ್ನು ಕಂಡು ತನಗದೇ ಸಾಕು ಎಂದು ಹಿಂದಕ್ಕೆ ಓಡಿತಂತೆ.

ಈ ಕವಿಯ 'ಪುರುಷ ಸೂಕ್ತ' ಹೀಗಿದೆ:

ಸಾವಿರಗಳನೆಲ್ಲಾ ಬರಿ
ಕೈಯಲೆ ತಾ ಕುಡಿಕುಡಿದು
ಸಾವಿರದವ ತಾನೊಬ್ಬನೆ

ತಾನೇ ಕೊನೆ ಮೊದಲೆಂದು
ಮೇಲೆದ್ದನು ಮಾದೇವ!

ದಾರಿಯಲ್ಲಿ ಬಿದ್ದ ಬಿಸಿಲು ಕವಿಗೆ 'ನಿದ್ದೆಬಾರದ ಹಸುಳೆ ಕೈ ನೀಡಿ ಮೇಲ್ಪುಸುಕನೊದ್ದು ನೋಡುವ ರೀತಿ' ಕಾಣಿಸಿದೆ. ಮಳೆ ಗಾಲ ಬಂದುದು ಕವಿಗೆ, 'ಹೊಳೆವೆಣ್ಣಿನ ಕೊಳೆ ಮೈಯನು ತೊಳೆತೊಳೆಯಲು ಕಡಲಯ್ಯನ ಕರೆಯೋಲೆಯು ಬಂತು!' ಎಂ ಬಂತೆ ಕಂಡಿದೆ. ಮಳೆ ಬಂದುದು, 'ಜಗವೆಲ್ಲವು ಹೆಣ್ಣಾಯಿತು, ಮುಗಿಲೆಲ್ಲವು ಕಣ್ಣಾಯಿತು' ಎಂಬಂತೆ ತೋರಿದೆ. ಡಿ.ವಿ.ಜಿ. ಯವರನ್ನು 'ನವ್ಯಯುಗದ ನಿರವಧಿಧೀ' ಎಂದು ಕರೆದಿದ್ದಾರೆ. 'ತ್ವಮೇವಾಹಂ' ಎಂಬ ಕವಿತೆಯಲ್ಲಿ ನೀನೇ ನಾನು ಎಂದು ಕವಿ ಕಾಣುತ್ತಾರೆ:

ಯಾರು ಬೇಡದ ಬಳ್ಳಿಯಲಿ ಮುಗು–
ಳೊಂದು ಮೆಲ್ಲನೆ ಮೂಡಿದೆ

× × ×

ಏತಕೇನೋ ಕುದುರೆಮುಖದಲಿ
ಹೊಸಲ ಬುಗ್ಗೆಯು ಸೂಸಿದೆ
ಆ ಸಮುದ್ರದ ತೀರದಲಿ ತೆರೆ–
ಯೊಂದು ಸೆರಗನು ಹಾಸಿದೆ.

× × ×

ನನ್ನ ಹಾಲಿಗೆ ಹಿಂಡಿ ಹುಳಿಯನು
ಯಾರೊ ಮೊಸರನು ಮೆದ್ದರು

ನನ್ನ ಪಾಲಿಗೆ ಬಂದ ದೇವರು
ಎಲ್ಲ ಬೆಣ್ಣೆಯ ಕದ್ದರು!

ಚೆಲುವಿಕೆಯ ಚಿತ್ತಾರದ, ಮಂದಾರದ ಮಿದುಗೆನ್ನೆಯ ಮನದನ್ನೆಗೆ ಕವಿ 'ಧನ್ಯವಾದ'ವನ್ನು ಹೀಗೆ ಚೆನ್ನಾಗಿ ಅರ್ಪಿಸಿದ್ದಾರೆ:

ಬಿಸಿಲಾಗಿ ಬಂದಾಗ ಜಳಜಳಕದಾನಂದ–
ದುಸಿರಾಡಿ ಸವಿಹಾಡಿದವಳು
ಹೊಸಸುಗ್ಗಿ ಸಿಂಗಾರದನುರಾಗ ಬಂಗಾರ
ತೆನೆ ತುಂಬಿ ತಲೆಬಾಗಿದವಳು.

ಮುಗಿಲಾಗಿ ಬಂದಾಗ ನವಿಲಾಗಿ ಕುಣಿದಾಡಿ
ನಗೆಯಾಡಿ ಬಗೆಗೂಡಿದವಳು
ಮಳೆಯಾಗಿ ಸುರಿದಾಗ ಹೊಳೆಯಾಗಿ ಮೈದುಂಬಿ
ಬೆಳೆ ಬದುಕಿನಿಳೆಗೊದಗಿದವಳು.

ಚಳಿಯಾಗಿ ಬಂದಾಗ ಬಳಿಸೇರಿ ಬೆಚ್ಚನ್ನ
ನಳಿದೋಳ ಬಿಗಿದಪ್ಪಿದವಳು.

ದೀಪಾವಳಿಯಿಂದಾಗಿ ನಾಡಿಗೆ ಬೆಳಕು ಬಂದಾಗ 'ಕದ ತಟ್ಟಿ ಕಲ್ಪನೆಯ ಸಾಸಿರ ನಿರೂಪಣೆಯ ಪದವಾಕ್ಯ ಸೋಸಿ ಬಂತು' ಎನ್ನುತ್ತಾರೆ ಕವಿ. ಕವಿಗೆ 'ಹೊಸನೋಟ' ಹೀಗೆ ಆಗಿದೆ:

ಯಾರೊ ಬಂದರು ಮೆಲ್ಲಮೆಲ್ಲನೆ
ಏನು ಮೋಹದ ಚೆಲುವಿಕೆ

ಮೊಗದ ಹೂ ಹರಿವಾಣದಲಿ ನಗೆ
ತುಟಿಯು ಮೌನದ ಕಾಣಿಕೆ!

ತಮ್ಮ ಹುಟ್ಟೂರನ್ನು ಕವಿ 'ಊರಲ್ಲಿ—ಚಿಕ್ಕದೊಂದಲರು' ಎಂದು ಕವಿಭಾಷೆಯಲ್ಲಿ ಹೇಳಿದ್ದಾರೆ. 'ಬೀದಿಯ ಸುಂದರಿ' ಕವಿಗೆ ಕಂಡುದು ಹೀಗೆ:

ನಡೆದು ಬಂದಳು ಸುಂದರಿ
ಒಡನೆ ಕಿಲಕಿಲನೆ ನಕ್ಕಂತೆ ಹೆದ್ದಾರಿ!

ಈ ಮಾತು ಷೇಕ್ಸ್ಪಿಯರ್ ಹೇಳಿದ, 'Heaven walks on the way' ಎಂಬ ಮಾತಿಗೆ ಸರಿಸಮಾನವಾಗಿದೆ. ಹೀಗೆ ಈ ಮಾನಸಗಂಗೆ ಕವಿ ಹೇಳಿದ ಹಾಗೆ ಸಹೃದಯರೆಲ್ಲರ ಮಾನಸಗಂಗೆಯಾಗಿದೆ.

ಕವಿಯನ್ನು ನಾನು ಕೇಳಿದೆ: 'ನಿಮ್ಮ ಶ್ರೇಷ್ಠ ಕೃತಿ ಯಾವುದು?' ಎಂದು. ಅದಕ್ಕವರು ತಟಕ್ಕನೆ, 'ಕಾವ್ಯ ಮನೋರಮಾ' ಎಂದರು. ಅದನ್ನು ನಾನು ಓದಿದ ಮೇಲೆ ಅವರು ಹೇಳಿದ ಅಭಿಪ್ರಾಯ ವೈಯಕ್ತಿಕವಲ್ಲ; ಸಾರ್ವತ್ರಿಕ ಎಂದೆನ್ನಿಸಿತು. ಇದು ೧೯೬೧ರಲ್ಲಿ ಪ್ರಕಟವಾಯಿತು. ಇದು ಕನ್ನಡ ಕವಿಗಳ ಕೃತಿಗಳಲ್ಲೇ ಒಂದು ವಿಶಿಷ್ಟ ಸಂಕಲನ. ಇದು ಕನ್ನಡ ಕವಿಯೊಬ್ಬರು ಸಂಸ್ಕೃತದಲ್ಲಿ ಬರೆದ ಶೃಂಗಾರ ಶತಕ. ಪುಸ್ತಕದ ಎಡಹಾಳೆಯಲ್ಲಿ ತಮ್ಮ ಕೃತಿಯನ್ನು ತಾವೇ ಅನುವಾದಿಸಿ ಕೊಟ್ಟ ಕನ್ನಡ ರೂಪ. ಬಲಹಾಳೆಯಲ್ಲಿ ಸಂಸ್ಕೃತ ವೃತ್ತಗಳು. ಸಂಸ್ಕೃತದಲ್ಲಿ ಮಹಾಕವಿಗಳು ಪ್ರಯೋಗಿಸಿದ ದ್ರುತವಿಲಂಬಿತಮ್, ಪ್ರಹರ್ಷಣೀಯಮ್, ವಸಂತ ತಿಲಕಾ, ಮಾಲಿನೀವೃತ್ತಮ್, ಮಂದಾ

ಕ್ರಾಂತಾ, ಹರಿಣೀವೃತ್ತಮ್, ಶಿಖರಿಣೀ, ಶಾರ್ದೂಲ ವಿಕ್ರೀಡಿತಮ್, ಸ್ರಗ್ಧರಾ—ಮೊದಲಾದ ವೃತ್ತ ಬಂಧಗಳಲ್ಲಿ ಈ ಕವಿ ನಿರರ್ಗಳವಾಗಿ ಕವಿತಾ ಸೃಷ್ಟಿ ಮಾಡಿದ್ದಾರೆ. ಇವರ ಹೆಸರು ಅಲ್ಲಿರದಿದ್ದರೆ ಸುಲಭವಾಗಿ ಸಂಸ್ಕೃತ ವಿದ್ವಾಂಸರು ಇದನ್ನು ಕಾಳಿದಾಸನಿಗೋ, ಭರ್ತೃಹರಿಗೋ ಅಮರುಕನಿಗೋ ಅಂಟಿಸಬಹುದು. ಮುದ್ರಣ ಮಾಡಿದ ಹಾಗೆ ಶ್ರೀ ವೆಂಕಟರಾಜರೂ ಈ ಕೃತಿಯನ್ನು ತಮ್ಮದೆಂದು ಹೇಳದೆ ಧಾರಾಳವಾಗಿ ಪ್ರಾಚೀನ ಸಂಸ್ಕೃತ ಕವಿಯೊಬ್ಬನ ಶೃಂಗಾರ ಶತಕ ಸಿಕ್ಕಿದೆ ಎಂದು ಹೇಳಿ ಪ್ರಸಿದ್ಧರಾಗಬಹುದಿತ್ತು!

ನಾನು ಕವಿಯ ಮನೆಗೆ ಹೋದಾಗ ಅವರ ಮೇಜಿನ ಮೇಲೆ ಓರಣವಾಗಿ ಜೋಡಿಸಿಟ್ಟಿದ್ದ ಭಾರವಿ, ಕಾಳಿದಾಸ, ಭರ್ತೃಹರಿ, ಭಾಸ, ಮಾಘ, ಬಾಣ ಮೊದಲಾದ ಸಂಸ್ಕೃತ ಕವಿಗಳ ಕೃತಿಗಳನ್ನು ಕಂಡೆ. ನಿಜವಾಗಿ ಹೇಳಬೇಕಿದ್ದರೆ ಈ ಕವಿಯ ನಿಜವಾದ ಪ್ರತಿಭೆ ಈ ಕೃತಿಯಲ್ಲಿ ಅಭಿವ್ಯಕ್ತಿಯನ್ನು ಪಡೆದಿದೆ. ಅವರು ಕನ್ನಡಕ್ಕಿಂತ ಸಂಸ್ಕೃತದಲ್ಲಿ ಹೆಚ್ಚು ಚೆನ್ನಾಗಿ ಬರೆಯಬಲ್ಲರೆಂದು ಸಾರುತ್ತದೆ. ಇಲ್ಲಿ ಕೆಲವು ಮೂಲ ಸಂಸ್ಕೃತ ವೃತ್ತಗಳನ್ನೂ, ಕವಿಯೇ ಕೊಟ್ಟ ಅನುವಾದವನ್ನೂ ಒಟ್ಟೊಟ್ಟಿಗೆ ಕೊಟ್ಟು, ಸಹೃದಯರು ಅವುಗಳ ಸ್ವಾರಸ್ಯವನ್ನು ಆಸ್ವಾದಿಸುವಂತೆ ಕೆಲವು ಶ್ರೇಷ್ಠ ವೃತ್ತಗಳನ್ನು ಉಲ್ಲೇಖಿಸುತ್ತೇನೆ. ಅನುವಾದ ಇರುವುದರಿಂದ ವ್ಯಾಖ್ಯಾನ ಅನಾವಶ್ಯಕ ಎಂದು ನನ್ನ ಭಾವನೆ:

ಶಾರ್ದೂಲ ವಿಕ್ರೀಡಿತಮ್||

ಆವರ್ತಮ್ ವಿಭವಾಸ್ಪದಂ ಗುರುಕುಚದ್ವಂದ್ವಂ
ಚಕೋರ ದ್ವಯಂ

ಕೂಲೇ ಸುಂದರ ಶೀತಲೋರು ಯುಗಳೇ ದಿವ್ಯಾಂಬರಂ
ಬಿಭ್ರತೀ
ಮಜ್ಜನ್ಮಾಂತರ ಪುಣ್ಯ ಪೂರಣಕೃತೇ ಸೈವಾಗತಾ
ಜಾಹ್ನವೀ
ತತ್ಪ್ರಾಂತಂ ಭವದಾಹದೀನ ವಿಪದಾಮಂತಂ
ನಿತಾಂತಂ ಭಜೇ ||

ಸುಳಿನಾಭಿ ಮಿಗೆಶೋಭಿ ಗುರುಕುಚ ಚಕೋರಂ
ಮಳಲುಡೆಯಲಿತ್ತಡಿಯ ನುಣ್ದೊಡೆಯ ಭಾರಂ
ಜನ್ಮ ಜನ್ಮದ ಪುಣ್ಯಕೊಲಿದ ರಸಗಂಗೆ
ಬಂದಿಹಳು ಭವದೆಡೆಗೆ ಪಾವನತರಂಗೆ!

ವಸಂತ ತಿಲಕಾ||

ಮಾನೋದ್ಧತಾ ಮಧುರ ಮಂಗಲ ಮಂಡನಾನಿ
ತ್ಯಕ್ತ್ವಾ ಮುಧಾ ತರುಣಚಿತ್ತವಿಲೋಭನೀಯಾಮ್
ನ ಪ್ರಾರ್ಥಿತಾಪಿ ಮುಮುಚೇ ಪರಿಬದ್ಧನೀವೀಂ
ಸಾ ತಾಮ್ರಚೂಡ ವಿರುತೈಃ ಶಿಥಿಲೀ ಚಕಾರ||

ಮಾನವತಿ ತೊರೆದು ಮಧುಭೂಷಣಂಗಳನೆಲ್ಲ
ಏನೊ ಮುನಿಸಿಲಿ ಮಲಗಿ ಮೈಸೆರಗು ಮುಚ್ಚಿ
ನಾನೆನಿತು ಕರೆದರೂ ಬಿಚ್ಚಲೊಲ್ಲದ ಕಟ್ಟು
ತಾನೆ ಸಡಿಲಿತು ಕೋಳಿಕೂಗುತಿರೆ ಬೆಚ್ಚಿ!

ಪ್ರಹರ್ಷಣೀಯಮ್ ||

ತಾರುಣ್ಯೋದಯ ಶಿಖರ ಸ್ತನಾಗ್ರದೇಶ
ವ್ಯಾಕೋಶದ್ವನಜಮುಖ ಪ್ರಸಕ್ತ ಭೃಂಗೌ

ಅನ್ಯಾನ್ಯನ್ಮಧುಮಹತಾಂ ಶತಾನಿ ಹಿತ್ವಾ
ಸಾನ್ಯೋನ್ಯಂ ರತಿ ವಿಷಯಂ ಚಿರಾದ ಭಾಷ್ಟಾರ್ನಮ್ ||

ಯೌವನೋದಯ ಪರ್ವತ
ಭವ್ಯ ಕುಚಗಳ ಕೊನೆಯೊ ಕಮಲಕೆ ಸಂದ ಮಧುಕರ
ಯುಗಳವೊ !

ಅನ್ಯ ಸುಖಶತ ನಿರ್ವೃತ
ಏನು ಹದನವೊ ಸರಸವಾಡದ ಜೊತೆಗೆ ಕೂಡದ
ಜಗಳವೊ !

ಆನಂದವರ್ಧನ ತನ್ನ ಧ್ವನ್ಯಾಲೋಕದಲ್ಲಿ ಧ್ವನಿಗೆ ಉದಾಹರಣೆಗಳನ್ನು ಕೊಡುತ್ತ ಅಮರುಕ, ಹಾಲ, ಕಾಳಿದಾಸರಿಂದ ಇಂಥ ವೃತ್ತಗಳನ್ನೇ ಉಲ್ಲೇಖಿಸಿರುವುದು ಸಹೃದಯರಿಗೆ ವಿದಿತ. ಶ್ರೀ ವೆಂಕಟರಾಜರ ಈ ಮುಕ್ತಕಗಳೂ ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರಗಳಾಗಿ ರಸಾನುಭವವನ್ನುಂಟು ಮಾಡುತ್ತವೆ. ವೃತ್ತ ಬಂಧದಲ್ಲಿ ಎಲ್ಲಿಯೂ ಚ, ವೈ, ತು, ಹಿ ಗಳೆಂಬ ಪಾದಪೂರಣಗಳಾಗಲೀ, ಅನಾವಶ್ಯಕ ಪದಪುಂಜವಾಗಲೀ ನುಸುಳದಿರುವುದು ಈ ಕವಿಯ ಅಗ್ಗಳಿಕೆ. ಶ್ರೇಷ್ಠಕವಿಗಳ ರಚನೆಗಳಲ್ಲೂ ಪಾದಪೂರಣಗಳು ಬಾರದಿರುವುದಿಲ್ಲ ಎಂದ ಮೇಲೆ ಈ ಸಿದ್ಧಿ ಕವಿಯ ನಿಜವಾದ ಸಾಮರ್ಥ್ಯ ಎನ್ನಬೇಕು.

'ಅಮರುಕಕವೇಃ ಏಕಶ್ಲೋಕಃ ಪ್ರಬಂಧಶತಾಯತೇ' ಎಂಬ ಪ್ರಶಂಸೆ ಅಮರುಕ ಕವಿಗಿದೆ. ನಾವು ಶ್ರೀ ವೆಂಕಟರಾಜರ ಬಗೆಗೆ ಹಾಗೆಯೇ ಹೇಳಬಹುದು. ಅವರು ಬೇರೆ ಕಾವ್ಯಗಳನ್ನು ಬರೆಯದಿದ್ದರೂ ಈ 'ಕಾವ್ಯ ಮನೋರಮಾ' ಶತಕದ ಒಂದೊಂದು

ವೃತ್ತವೂ ಪ್ರಬಂಧಶತದ ಯೋಗ್ಯತೆಯನ್ನು ಹೊಂದಿವೆ. 'ಕಾವ್ಯ ಮನೋರಮಾ' ಎಂಬ ಇದರ ಹೆಸರು ಅನ್ವರ್ಥಕವಾಗಿ ಸಹೃದಯರ ಮನೋರಮಾ ಆಗಿದ್ದಾಳೆ.

'ಪದ್ಮಸರೋವರ' ಕವಿಯ ಐದನೆಯ ಕವನ ಸಂಕಲನ. ಇದು ೧೯೬೨ರಲ್ಲಿ ಪ್ರಕಟವಾಯಿತು. ಇದರಲ್ಲಿ ಮೂವತ್ತು ಕವನಗಳಿವೆ. 'ಪುಣ್ಯ-ಪರಂಪರೆ' ಎಂಬ ಕವನದಲ್ಲಿ ಬುದ್ಧನಿಂದ ಹಿಡಿದು ಏಸು, ಗಾಂಧಿಯವರೆಗೆ ಅದು ಸರಿದು ಬಂದ ರೀತಿಯನ್ನು ಕವಿ ವರ್ಣಿಸಿರುವುದು ಚೆನ್ನಾಗಿದೆ.

ಬುದ್ಧ ಬಂದ
ಕೊಳಕು ಕತ್ತಲ ಮುಸುಕ-
ನೊದ್ದು ಬಂದ

*   *   *

ಸಾವು ನೋವಿನ ಮುಖಕೆ
ಮಾಂಗಲ್ಯ ಕುಂಕುಮವ-
ನಿಟ್ಟು ಕಾದಿದ್ದನಾ ಧರ್ಮ ಮೂರ್ತಿ !

*   *   *

ಏಸು ಬಂದ
ಕತ್ತಲೆಯ ಕರಿಯಂಚ-
ನೀಸಿ ಬಂದ !

*   *   *

ಗಾಂಧಿ ಬಂದ
ಹಗೆ ಕೇಳು ಹಗರಣದ

ಮೊನೆ ಮೊನೆಯ ಮುಳ್ಳಿನಲಿ
ನಡೆದು ಬಂದ

*   *   *

ನೊಗ ಹೊತ್ತ ಭಾರಕ್ಕೆ
ಬರಿ ಹೆಗಲ ಮುರಿತಕ್ಕೆ
ಮೇಲೆದ್ದು ನಿಂದ !

*   *   *

ಹರಣ ಹತ್ತಿಯ ಹಿಂಜಿ
ನಲ್ಮೆ ನೂಲನು ನೆಯ್ದು
ತನ್ನತನವನು ಹೊಸೆದ
ಮಹಾಪುರುಷ.'

*   *   *

ನಮ್ಮ ಹೃದಯದ ಮುರುಕ
ಕನ್ನಡಿಗೆ ತೆತ್ತಿರುವ
ರಸಸ್ಪರ್ಶ !

'ದೀಪ ನಮಸ್ಕಾರ' ಎಂಬ ಕವನದಲ್ಲಿ ವಿದ್ಯುದ್ದೀಪ ಕಣ್ಣು ಮುಚ್ಚಾಲೆಯಾಡಿದಾಗ ಏನೇನೆಲ್ಲ ಆಗಬಹುದು ಎಂಬುದನ್ನು ಹೇಳಿದ್ದಾರೆ:

ಆದರೇನು ಗಂಡುಹೆಣ್ಣು
ಒಳ್ಳೆ ಸಮಯ ಬಂದಿತೆಂದು

ಊಟ ಬಿಟ್ಟು ತುಟಿಯನೊಟ್ಟಿ
ಕೊಡಿಸಿರುವ ಮುನ್ನುಡಿ !

ಕಾವ್ಯ ಕಾಮಿನಿ ಕವಿಯನ್ನು ಅರಸಿ ಬರುವುದನ್ನು 'ಮೊದಲು ಬಂದಾಗ' ಎಂಬ ಕವನದಲ್ಲಿ ಸೊಗಸಾಗಿ ಬಣ್ಣಿಸಿದ್ದಾರೆ:

ಬೆಟ್ಟ ತುದಿಯ ಮೇಲೆ ಬೆಳೆದು
ಸುಟ್ಟು ಹೋದ ಬಿದಿರ ಮೆಳೆಗೆ
ಹಕ್ಕಿ ಹಾರಿ ಬರುವುದೆಂದು
ಯಾರು ಕಂಡವರು?

* * *

ಒಂದೆ ಗೇಣಿಗೆಟಕಲಿರುವ
ಸೊದೆಯ ಪುಣ್ಯ ಕಲಶಕಾಗಿ
ಹೃದಯಮಥನವಾಗುತಿತ್ತು
ಏನು ತಳಮಳ !

ಹೀಗೆ ಹೊತ್ತು ಕಳೆಯಲುಂಟೆ?
ಅಯ್ಯೊ-ಎಂದು ನಕ್ಕಳಾಗ
ಸೇಸೆಯಿಕ್ಕಿ ಸೊಡರನೆತ್ತಿ
ಭಾವಸೋದರಿ.

ಮತ್ತೆ ಹೊತ್ತು ಕಳೆಯಲಿಲ್ಲ
ಕಳೆದ ಹೊತ್ತು ತಿಳಿಯಲಿಲ್ಲ
ಕೈಯ ಮೇಲೆ ಕುಣಿದಳಲ್ಲ
ಕಾವ್ಯ ಸುಂದರಿ!

'ಆಗಸ್ಟ್ ೧೫' ಎಂಬ ಕವನದಲ್ಲಿ ನಮಗೆ ಸ್ವಾತಂತ್ರ್ಯ ಬಂದ ಪರಿಣಾಮವನ್ನು ಪರಿಣಾಮಕಾರಿಯಾಗಿ ಹೇಳಿದ್ದಾರೆ:

ಯಾರೊ ನಮ್ಮೆಲ್ಲ ಜೇನನು ಹಿಂಡಿ ಕುಡಿಕುಡಿದು
ತೆರಳಿರುವ ಪರಕೀಯರಂತೆ
ಯಾರೇನು? ನಮ್ಮವರೆ ನಮ್ಮೆಲ್ಲ ಹರಣಗಳ
ಹಿಡಿದು ಹಿಂಡುವರೀಗ ಜಿಗಳೆಯಂತೆ!

ಸರದಾರ ಬಿಳಿಕುದುರೆ ಮೇಲೇರಿ ವೈಮರೆತು
ಅಂದೆಲ್ಲರಿಗು ಕೊಟ್ಟ ಲತ್ತೆ
ಸರಿಯಾಯ್ತು ನೋಡೀಗ ಒದೆಯಂತು ತಪ್ಪಿಲ್ಲ
ಕುದುರೆ ಹೋಯಿತು ಬಂತು ಕತ್ತೆ!

ಕವಿ ಚೆನ್ನೆಯನ್ನು 'ನಗಬೇಡ' ಎನ್ನುತ್ತಾರೆ, ಅದೇ ಹೆಸರಿನ ಕವನದಲ್ಲಿ. ಯಾಕೆಂದರೆ,

ನಗಬೇಡ ನಗಬೇಡ ನಗಬೇಡ ಚೆನ್ನೆ
ನಕ್ಕಾಗ ಬೆಳದಿಂಗಳಾದೀತು ಕೆನ್ನೆ!

'ಭಾವೈಕ್ಯತಾ ಪರಿಷತ್ತು' ಎಂಬ ಕವನದಲ್ಲಿ ನಾವು ನಮ್ಮ ಗತವೈಭವಕ್ಕೆ ಜೋತುಬಿದ್ದು ಸೋಮಾರಿಗಳಾಗಿದ್ದೇವೆ ಎಂಬ ಭಾವ ಸಶಕ್ತನಾಗಿ ಹೊಮ್ಮಿದೆ; ಸಮಕಾಲೀನ ಪ್ರಜ್ಞೆ ಅಚ್ಚೊತ್ತಿದೆ:

ನಮ್ಮ ಗತವೈಭವದ ಹಳೆ ಪುರಾಣದ ಡೋಲು
ಹೊಡೆದು ತಿರುಗುವ ನಮ್ಮ ಹೆಮ್ಮೆ
ಎಂದೊ ಹದಿನಾರು ಖಂಡುಗ ಘಾಲು ಕೊಟ್ಟಿರುವು-
ದೆಂದು ಸಾಕುವೆವು ಬರಡೆಮ್ಮೆ!

'ಬೀದಿಭಾಷಣ' ಎಂಬ ಕವಿತೆಯಲ್ಲಿ ಮಾಕೊಂದು, ಕೃತಿಯೊಂದಾದುದನ್ನು ಕಂಡಾಗ ಆದ ವೈಪರೀತ್ಯಗಳನ್ನು ಮಾರ್ಮಿಕವಾಗಿ ಹೇಳಿದ್ದಾರೆ:

ಕಾರ್ಖಾನೆಯೊಡೆಯನಿಗೆ
ಹನ್ನೆರಡು ಸೂಳೆ
ಎಲ್ಲರಿಗು ಕಿವಿಯಲ್ಲಿ
ವಜ್ರದಾ ಹರಳೆ!
ಮೂರು ಮಹಡಿಯ ಮೇಲೆ
ಬೆಚ್ಚಗಿನ ಕೋಣೆ
ಯಾವ ರಕ್ತವ ಹೀರಿ
ಬೆಳೆದಿರುವ ತಗಣೆ ?

'ಸಹಧರ್ಮಿಣಿ' ಎಂಬ ಕವನದಲ್ಲಿ ಕವಿ ಪತ್ನಿಯ ಬಗೆಗೆ ತಮ್ಮ ಅಭಿಪ್ರಾಯವನ್ನು ತೋಡಿಕೊಂಡಿದ್ದಾರೆ. ಅನೇಕರಿಗೆ ಧರ್ಮಪತ್ನಿ ಕೇವಲ ಹಾಗೆಯೇ ಆಗಿದ್ದರೆ, ಕೆಲವರಿಗೆ ಹಾಗಾಗದಿರುವುದು ಅವರವರ ಪುಣ್ಯ.

ಮೈ ಗಮ ಗಮ ಬಗೆ ಸುಮ ಸುಮ–
ದಾನಂದದ ನೆಯ್ಗೆ
ಶೃಂಗಾರದ ಸೆಲೆಯೂದಿದ
ಸಂಗೀತದ ಹಾಗೆ
*　　　*　　　*
ಏನಿಹ ಹೆಣ್ಣು—ಎಂಥ ಹಣ್ಣು
ಯಾವ ಪುಣ್ಯದೊರತೆ

ಬಾನ ಭುವಿಯ ರಸ ನಿಮಿಷದ
ಏಕ ಮಾತ್ರ ಕವಿತೆ!

'ಪಾರಿಜಾತ' ಎಂಬ ಕವನದಲ್ಲಿ ಆ ಹೂವಿನ ಸೊಗಸನ್ನು ಆತ್ಮೀಯವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ:

ಹೂಗಳಲೆಲ್ಲಾ ಪಾರಿಜಾತವೇ
ಬಲುಸೊಗಸೆಂಬೆನು ನಾನು
ನಾಗವೇಣಿಯರ ನಗೆಯೊಳಗದ್ದಿ
ಬರೆದವರಾರಿದನು?

ಅಪ್ಸರೆಯರು ಚೆಂದುಟಿಗಳನೊತ್ತಿ
ಎಸೆದರು ಹೂವನು ಕೆಳಗೆ
ಅವರನುರಾಗದ ಸಂತಸವೆಲ್ಲಾ
ಸೆಲೆಗೊಂಡಿಹುದಿದರೊಳಗೆ.

'ಗುಲಾಬಿಯ ಕತೆ' ಒಂದು ಒಳ್ಳೆಯ ಕವಿತೆ. ಗುಲಾಬಿಯನ್ನು ಸಂಕೇತವಾಗಿರಿಸಿಕೊಂಡು ಕವಿ ಮಾನವರ ಕಠೋರ ವರ್ತನೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ಇದೊಂದು ಕಥನ ಕವನವೆಂಬಂತಿದೆ. ಕೊಳಕು ಚರಂಡಿಯಲ್ಲಿ ಬಿದ್ದ ಗುಲಾಬಿ ಹೂ ಕವಿಗೆ ಕಾಣಿಸುತ್ತದೆ:

ಕೊಳಕು ಚರಂಡಿಯ ಹಸಿ ಹಸಿ ಕೆಸರಿಲಿ
ಬಿದ್ದಿತೊಂದು ಗುಲಾಬಿ
ನಸು ಬೆಳಕಿನ ಹನಿ ಹನಿ ಮಳೆಯಲಿ ಕಾಲ್
ಜಾರಿದಳೇನೊ ಬೀಬಿ!

ಅದನ್ನು ಕಂಡು ಕಪ್ಪೆ ತನ್ನ ಅರಮನೆಯ ಬಾಗಿಲಲ್ಲಿ ಇದೇನು ಯೋಗಾಯೋಗ ಎಂದು ಸಂತಸದಿಂದ ಅಂತರ್ಲಾಗ ಹಾಕಿತಂತೆ. ಊರಿನ ದೊರೆಯು ಹೂದೋಟದಲ್ಲೇ ಬೆಳೆದ ಸರೋಜಕ್ಕೆ ಸರಿಸಮುಳಾದ ರೋಜವಂತೆ ಅವಳು. ರಾಜಕುಮಾರಿ ತನ್ನನ್ನು ಮುದ್ದಿಸಿ ತನ್ನ ರತಿಕೇಳಿಯಲ್ಲಿ ಉಪಯೋಗಿಸಿಕೊಂಡಳಂತೆ. ಅವಳು ಅದನ್ನು ತನ್ನ ಪತಿರಾಯನಿಗೆ ಕೊಟ್ಟಳಂತೆ. ಅವನೋ,ಅದನ್ನು ತೆಗೆದುಕೊಂಡು ಸೂಳೆಯ ಮನೆಗೆ ಹೋದ

ಗಂಜಳದಲಿ ಮೈಕೊಸರಿದ ಹಂದಿಗೆ
ಗಂಜಳವೇ ಶ್ರೀಗಂಧ
ಅಂಜಿಕೆಯಿಲ್ಲದೆ ಸೂಳೆಯ ಮನೆಯನು
ಹೊಕ್ಕನು ಋಣಾನುಬಂಧ

ಅದನ್ನು ಅವನು ಅವಳಿಗೆ ಅರ್ಪಿಸಿದ. ಅವಳು ಇನ್ನೊಬ್ಬ ವಿಟನಿಗೆ ಕೊಟ್ಟಳು. ಅವನಿಗೆ ಅದು ಬೇಕಾಗದೆ ಅದನ್ನೆಸೆದ:

ಕೆಳ ಕೆಳಗಿಳಿದೆನು ಹಲಹಲವಾಯಿತು.
ಹೊಲೆ ಹೊಲಸಿನ ಸಾವಾಸ
ಚೆಲು ಹೂದೋಟದ ಚಂದಿರವದನೆಗೆ
ದಾರಿಯ ಬದಿಯುಪವಾಸ!

ಕವಿಯ ಆರನೆಯ ಕವನ ಸಂಕಲನ 'ಮಾನಸಪುಷ್ಪ'. ಇದು ೧೯೬೪ರಲ್ಲಿ ಪ್ರಕಟವಾಯಿತು. ಇದರಲ್ಲೂ ಮೂವತ್ತು ಕವನಗಳಿವೆ. ಲಡಾಕಿನ ಗಡಿಯಲ್ಲಿ ಕೇವಲ ಇಪ್ಪತ್ತಾರು ಜನ ಭಾರತೀಯ ಸಿಪಾಯಿಗಳು ಸುಮಾರು ನಾನ್ನೂರಕ್ಕೂ ಮಿಕ್ಕಿ ಆದ ಚೀನೀ ಸೈನಿಕರನ್ನು ದಿಟ್ಟತನದಿಂದ ಎದುರಿಸಿ ಓಡಿಸಿದ ರೋಮಾಂಚಕ ಘಟನೆಯನ್ನು ನೆನೆದು 'ಅಜೇಯ ಇಪ್ಪತ್ತಾರು' ಎಂಬ ಕವನವನ್ನು ಬರೆದಿದ್ದಾರೆ.

ಮಿಂಚೆರಗಿದಂತೆ ಜುಮ್ಮೆಂದಿತೋ ನೀರವದ
ಹಿಮಗಿರಿಯ ರುದ್ರಸಹನೆ!

ಆದಿ ಪ್ರಾಸವನ್ನು ಬಿಟ್ಟ ಮಾತ್ರಾಗಣದ ಸಾಂಗತ್ಯ ಲಯದ ಕವಿತೆಯನ್ನು ಈ ಕವಿ ಬರೆದಿದ್ದಾರೆ.

ತಲೆಯೆತ್ತಿ ನಿಂತಿಲ್ಲ ಮುಖವೆತ್ತಿ ನೋಡಿಲ್ಲ
ನೆಲದ ಮೇಲಿತ್ತೆನ್ನ ಕಣ್ಣು
ಎಲ್ಲರೂ ನುಡಿದಿಹರು ಏನು ನಾಚುಗೆಯಪ್ಪ
ಎಷ್ಟು ಮರ್ಯಾದೆಯ ಹೆಣ್ಣು!

ಗಾಂಧೀಜಿಯ ನಗುವಿನ ಭಂಗಿ ಕವಿಗೆ ಹೀಗೆ ಕಂಡಿದೆ:

ಕೈಮುಗಿದು ನಗುತಿರುವನೊಬ್ಬ ಮುದುಕ
ಅಮೃತ ಚೆಲ್ಲಿದ ಹಾಗೆ ಕಂಡಿತೋ ಮರ್ತ್ಯಲೋಕ

ಮನುಷ್ಯ ಕೋಟಿ ಕೋಟಿ ಜಂತುಗಳ ಮಧ್ಯೆ ಇರುವ ಒಂದು ಕ್ಷುಲ್ಲಕ ವಿಷಯ ಎಂಬ ಅರಿವು ಕವಿಗಿದೆ:

ಯಾರಯ್ಯ ನೀನು ?
ಈ ಮಹಾಸಾಗರದ ಚಿಕ್ಕ ಮೀನು!
ನಾನೆಂದು ಮೊಗವೆತ್ತಿ ನೋಡಿದರೆ ಸಾಕೆ?
ಬಾನಡಿಯ ವಿಸ್ತಾರ ವಲಯದಲಿ ನೀನೊಬ್ಬ
ಯಾರಿಗೂ ಕಾಣದಿಹ ಸಣ್ಣ ಚುಕ್ಕೆ!

'ಪೆನ್ನು' ಕವಿಗೆ 'ಗುಟುಕು ಗುಟುಕು ಮಸಿಯನುಂಡು ಸೊದೆಯನೀವ ಕಲ್ಯಾಣಿ'ಯಾಗಿ ಕಂಡದ್ದು ವಿಶಿಷ್ಟವಾಗಿದೆ. 'ಕಾಮಾಯಣ' ಎಂಬ ಕವನದಲ್ಲಿ ಕವಿ ಪ್ರಿಯೆಯ ಮುತ್ತು, ಸ್ಪರ್ಶದ ಮಹತ್ತ್ವವನ್ನು ಬಣ್ಣಿಸಿದ್ದಾರೆ:

ಮುದ್ದು ಕುಡಿಯುಲು ಬಾಯಿಸೇರದು
ಅದನು ನೀನೆ ಕುಡಿದು
ಮುದ್ದುಕೊಟ್ಟರೆ ನನ್ನ ಜೀವಕೆ
ಒಳ್ಳೆದಾಗಬಹುದು.
ಹತ್ತಿಯಾದರು ವ್ಯೆಯ ನೋವಿಗೆ
ಮುಳ್ಳಿನಂತ ಬೇನೆ
ಒತ್ತಿ ಕುಳಿತರೆ ಮೆತ್ತ ಮೆತ್ತಗೆ
ಆಗ ಬಹುದು ನೀನೆ.

'ಎಲ್ಲೋ ಮಳೆ ಬಂದಂತಿದೆ' ಎಂಬ ಕವನದಲ್ಲಿ ಕವಿಕಲ್ಪನೆ ಹೃದಯಂಗಮವಾಗಿದೆ:

ಭೂಗರ್ಭದ ಹೊಸ ಹಸುಳೆಗೆ
ಮೊಲೆ ಹಾಲನು ಕೊಟ್ಟಂತಿದೆ
ಇಹಲೋಕಕೆ ಪರಲೋಕದ
ಸಂಪರ್ಕವನಿಟ್ಟಂತಿದೆ.

"ಸ್ಮಾರಕ ಗೀತೆ" ಎಂಬ ಕವನದಲ್ಲಿ ಕವಿ ರಾಷ್ಟ್ರಕವಿ ಗೋವಿಂದ ಪೈಯವರನ್ನು ಕುರಿತು ತಮ್ಮ ಕವಿ ಸಹಜವಾದ ಅನಿಸಿಕೆಗಳನ್ನು ಹರಿಯ ಬಿಟ್ಟಿದ್ದಾರೆ.

ಐದಾರು ದಶಕಗಳ ಬಾಳ ಬಿತ್ತನೆಯಲ್ಲಿ
ಕನ್ನಡದ ಹೊಲವಾಯ್ತು ಹಚ್ಚ ಹಸನು

* * *

ನಮ್ಮಂತೆ ಕಾಗದವ ಕಪ್ಪು ಮಾಡಲಿಕೆಂದು
ಹೊರಟವರು ನೀವಲ್ಲ—ನಿಮ್ಮ ಬರಹ
ಕಪ್ಪಿನಲಿ ಬಿಳಿದಾಗಿ ಕತ್ತಲಲಿ ಬೆಳಕಾಗಿ
ಮೋಡದಲಿ ಮಿಂಚಾಗಿ ತೋರುವ ಸಮೂಹ!

ಕನ್ನಡಮ್ಮನ ಕೋಣೆ ಕೋಣೆಗಳ ಕದದೆರೆದು
ಅಂಜನದ ದೀವಿಗೆಯನಿಟ್ಟವರು ನೀವು
ಇನ್ನೇನು? ಕಸಕಡ್ಡಿ ಕಲ್ಮಶದ ಮಧ್ಯದಲಿ
ಹೊನ್ನಗಂಟನು ಕಂಡು ಹಿಡಿದಿರುವ ಸೋವು!

ನೀವು ಮೆಟ್ಟದ ಹಾದಿ ನಿಮ್ಮ ಕಾವ್ಯ ಸಮಾಧಿ
ಕನ್ನಡಕೆ ಕೊಟ್ಟ ರಾಷ್ಟ್ರೀಯ ಹೆದ್ದಾರಿ!

*　　　*　　　*

ನಾವುಣ್ಣುವ ಸೊತ್ತಲ್ಲ, ನಮಗೆ ಗಂಟಲುನೋವು
ಆದರೂ ತುರುಕಿದಿರಿ ಮೆಲ್ಲ ಮೆಲ್ಲ
ಮರಿ ಮರಿಯು ಬಾಯ್ದೆರೆಗೆ ಕಿರುಗುಟುಕನೀವಂತೆ
ಹೊಸ ಹೊಸತು ಮೇವುಗಳ ಕೊಟ್ಟಿರಲ್ಲ!

ಶ್ರೀ ವೆಂಕಟರಾಜರ ೬೦ ಕವನಗಳ ಇನ್ನೊಂದು ಕವನ ಸಂಕಲನ ಅಚ್ಚಿಗೆ ಸಿದ್ಧವಾಗುತ್ತಿದೆ. ಅವರ ಕವನ ಸೃಷ್ಟಿಯ ಮುಖ್ಯ ಲಕ್ಷಣ ಅವರು ಯಾರನ್ನೂ ಅನುಕರಿಸದಿರುವುದು. “ನಾನು ಕಂಡುದನ್ನು ನನಗೆ ತೋರಿದಂತೆ ಕನ್ನಡದಲ್ಲಿ ಹೇಳಿದ್ದೇನೆ” ಎಂದು ಅವರು ಹೇಳುತ್ತಾರೆ. ಅವರು ತಮ್ಮ ಕೃತಿಗಳಿಗೆ ಯಾರಿಂದಲೂ ಮುನ್ನುಡಿಯನ್ನು ಬರೆಯಿಸಲಿಲ್ಲ. ಶ್ರೀ ವೆಂಕಟರಾಜರ ಮೆಚ್ಚಿನ ಕವಿ ರನ್ನ. ಹೊಸಗನ್ನಡದಲ್ಲಿ ಕಡೆಂಗೋಡ್ಲು, ಜಿ. ಆರ್. ಪಾಂಡೇಶ್ವರ್, ಬೇಂದ್ರೆ, ಕುವೆಂಪು ಅವರು ಮೆಚ್ಚಿದ ಇತರ ಕವಿಗಳು. ಸಾಹಿತಿಗಳಲ್ಲಿ ಅವರಿಗೆ ಗೋವಿಂದ ಪೈ, ಡಿ.ವಿ.ಜಿ., ಕಾರಂತರ ಬಗೆಗೆ ಗೌರವವುಂಟು. ಜೀವನದ ಉದ್ದಕ್ಕೂ ಈ ಸಾಹಿತಿಗಳು ಕುಸ್ತಿಮಾಡಿಯೇ ಮುಂದಕ್ಕೆ ಬಂದರು ಎಂಬುದಕ್ಕಾಗಿ ಕವಿಗೆ ಇವರ ಬಗೆಗೆ ಅಭಿಮಾನ.

'ನವ್ಯಕಾವ್ಯ'ದ ಬಗೆಗೆ ಅಡಿಗರೊಬ್ಬರನ್ನು ಬಿಟ್ಟರೆ ಇತರರ ಬಗೆಗೆ ಒಳ್ಳೆಯ ಅಭಿಪ್ರಾಯವಿಲ್ಲ. "ಅಡಿಗರಲ್ಲಿ ನಿಜವಾದ ಸತ್ತ್ವ, ಜೀವಾಳವುಂಟು. ಉಳಿದವರೆಲ್ಲ ಅವರನ್ನು ಅನುಕರಿಸುತ್ತಾರೆ. ಏನು ಬರೆಯುತ್ತಾರೆ ಎಂಬುದು ಅವರಿಗೇ ಗೊತ್ತಿಲ್ಲ. ಅಸ್ಪಷ್ಟತೆಗೆ ಅದೇ ಕಾರಣ" ಎನ್ನುತ್ತಾರೆ. ಕನ್ನಡ ಸಾಹಿತ್ಯದ ಭವಿಷ್ಯದ ಬಗೆಗೆ ಅವರು ಈ ಅಭಿಪ್ರಾಯ ಇಟ್ಟುಕೊಂಡಿದ್ದಾರೆ: "ಕಸವೆಲ್ಲ ಕೊಚ್ಚಿ ಹೋಗುತ್ತದೆ; ಸತ್ತ್ವ ಉಳಿಯುತ್ತದೆ." ಶ್ರೀ ವೆಂಕಟರಾಜರ ಕನ್ನಡ ಕವನ ಸಂಕಲನಗಳಲ್ಲಿ ಬರಲಿರುವ ಕೃತಿ ತಮ್ಮ ಶ್ರೇಷ್ಠ ಕವನ ಸಂಕಲನವಾಗಲಿರುವುದು ಎಂದು ಅವರು ಭಾವಿಸುತ್ತಾರೆ.

೩

# ಸಣ್ಣ ಕತೆಗಳು

ಶ್ರೀ ಎಸ್. ವೆಂಕಟರಾಜರು ಎರಡು ಸಣ್ಣಕತೆಗಳ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಮೊದಲು ಇಪ್ಪತ್ತು ಕತೆಗಳಿರುವ 'ಆಕಾಶ ಗಂಗೆ' ೧೯೪೫ರಲ್ಲಿ ಪ್ರಕಟಿತವಾಯಿತು. ಎರಡನೆಯದು 'ಸಪ್ತಸ್ವರ'. ಅದರಲ್ಲಿ ಏಳು ಕತೆಗಳಿವೆ. ಇದು ೧೯೪೭ರಲ್ಲಿ ಪ್ರಕಟಿತವಾಯಿತು.

'ಪ್ರಪಂಚದ ಅನುಭವವು ತನ್ನ ಕಾಲಬುಡಕ್ಕೆ ತಿರುಗಿದಾಗಲೇನೇ ಮನುಷ್ಯನಿಗೆ ತತ್ತ್ವೋದಯವಾಗುವುದಲ್ಲವೆ?' ಎಂಬುದರ ಸುತ್ತ ಹೆಣೆದ ಕತೆ 'ಸ್ವಾನುಭವ.' ಮಾದಿಗರ ಹುಡುಗ ಮಾದು ತಂತ್ರಿಗಳ ಬಾವಿ, ಕೆರೆ ನೀರನ್ನು ಮುಟ್ಟಬಾರದು ಎಂಬ ಕಠೋರ ನಿಯಮ ತಂತ್ರಿಗಳ ಮುದ್ದು ಹುಡುಗಿಯನ್ನು ಆಹುತಿ ತೆಗೆದುಕೊಳ್ಳುವಂತಾಯಿತು. ಅವರ ಮನೆಯ ಬಾವಿಗೇ ಅವಳು ಬಿದ್ದಾಗ ಮಾದು ನೋಡುತ್ತಿದ್ದರೂ ಏನೂ ಮಾಡದಾದ !

ಬಾಳಿನ ಬಡತನದಿಂದ ಬಿಕಾರಿಯಾದ ತರುಣ, ವೇಶ್ಯೆಯ ಮಗಳೊಬ್ಬಳ ಸುತ್ತ ಹರಡಿದ ಕತೆ 'ಸೂಳೆಯ ಸಂಪತ್ತು.' ಇವನು ಭಿಕಾರಿಯಾಗಿದ್ದಾಗ ಅವಳನ್ನು ಅಂಗಲಾಚಿ ಬೇಡಿದರೂ ಅವಳು ದೊರೆಯುವುದಿಲ್ಲ. ಕಾಲಚಕ್ರ ಉರುಳುತ್ತದೆ. ತರುಣ ಉದ್ಯೋಗಿ ಶ್ರೀಮಂತನಾಗುತ್ತಾನೆ. ಆ ತರುಣಿ ತಾರುಣ್ಯವನ್ನು ಕಳೆದುಕೊಂಡು ರೋಗದ ತವರುಮನೆಯಾದಾಗ ಇವನ ಗುರುತು ಹತ್ತುತ್ತದೆ.

'ಧರ್ಮಶಾಲೆ' ಎಂಬುದು ಒಂದು ಒಳ್ಳೆಯ ಕತೆ. ಧರ್ಮ ಪರಾಯಣರು ಕಟ್ಟಿಸಿದ ಧರ್ಮಶಾಲೆಯಲ್ಲಿ ವೇಶ್ಯಾವೃತ್ತಿ. 'ಹಿರಿ ದಾದ ಕಟ್ಟಡ. ಅಲ್ಲಿಗೆ ಬರುವ ಜನರಿಗೇನೂ ಮಿತಿಯಿಲ್ಲ. ಆದರೆ ಕೊನೆಗೆ ಅಲ್ಲಿ ಉಳಿವ ಪದಾರ್ಥಗಳೆಂದರೆ ಮಸಿ ಬೂದಿ. ನನ್ನದೂ ಅಂತೆಯೆ ಒಂದು ಬರಿದಾದ ಧರ್ಮಶಾಲೆ! ದಿನದಿನದ ಗೈಮೆಯ ನಂತರ ನನ್ನ ಪ್ರಯಾಸಮಯ ವಿತರಣೆಗಾಗಿ ದೊರೆವ ಬಹು ಮಾನ—ಎರಡು ಕುರುಡು ಕಾಸು.'

'ಜೀವನ ಸಂಗೀತ'ದಲ್ಲಿ ಬೇರೊಬ್ಬ ಗೃಹಿಣಿಯ ಸಂಗೀ ತಕ್ಕೆ ಆಸೆಪಟ್ಟು ಅವಳ ಮನೆಗೆ ಆಗಾಗ ಹೋಗುತ್ತಿದ್ದುದರಿಂದ ಆ ಗೃಹಿಣಿಯ ಗಂಡ ಬಿಡಾರ ಬದಲಾಯಿಸಿದ ಕತೆಯಿದೆ. 'ನನ್ನ ರೊಮಾನ್ಸ್' ಎಂಬ ಕತೆಯಲ್ಲಿ ತರುಣನೊಬ್ಬ ತರುಣಿಯರ ಆಡಂಬರಕ್ಕೆ ಮಾರು ಹೋಗಿ ಅನುಸರಿಸಿ ಹೋದಾಗ ಕಂಡದ್ದು ಸೂಳೆಗೇರಿ. ಅಲ್ಲಿಂದ ತಪ್ಪಿಸಿಕೊಂಡು ಬರಲು ಸಾಹಸಮಾಡ ಬೇಕಾಯಿತು ಎಂಬುದು ನಿರೂಪಿತವಾಗಿದೆ.

'ಧರ್ಮರಹಸ್ಯ' ಎಂಬುದು ಒಂದು ವಿಚಾರಪ್ರಧಾನ ವಾದ ಕತೆ. ಗಂಡು ಸ್ವೇಚ್ಛೆಯಿಂದ ಬದುಕಬಹುದು; ಹೆಣ್ಣು ಮಾತ್ರ ಮರ್ಯಾದೆಯನ್ನು ಕಾಪಾಡಿಕೊಳ್ಳಬೇಕು. 'ಸಿಕ್ಕಲ್ಲಿ ಮೇದು ರುಚಿಯರಿತ ಗೂಳಿಗೆ ಕೊರಳ ಕೊರಡಿನ ಭಾರದ ಭೀತಿಯೇನು?' ಆ ತಂದೆಯೆಂಬ ಗೂಳಿ ತಾಯಿ ಕಾಮ ಧೇನುವಿನ ಪ್ರಾಣ ಹೀರಿತು. 'ಎಂದಿನ ತನಕ ತಂದೆಯು ಮಗನ ವಿಷಯದಲ್ಲಿ ಜನ್ಮಕ್ರಿಯೆಯೊಂದೇ ತನ್ನ ಕರ್ತವ್ಯ ವೆಂದು ಬಗೆದು ಆದರಿಂದಾಗಿಯೇ ತನ್ನ ಅಧಿಕಾರವನ್ನು ಚಲಾಯಿಸತೊಡಗಿರುವನೋ ಅಂದಿನ ತನಕ ಮಗನಾದರೂ

ತಂದೆಯ ವಿಚಾರವಾಗಿ ಅಪರಕ್ರಿಯೆಯೊಂದೇ ತನ್ನ ಕರ್ತವ್ಯ ವೆಂದು ಭಾವಿಸುವುದರಲ್ಲಿ ತಪ್ಪೇನಿದೆ?'

ಹೆಣ್ಣಾಗಿ ಹುಟ್ಟುವುದು ಒಂದು ಮಹಾಪಾಪ ಎಂಬು ದನ್ನು ಕುರಿತ ಕಥೆ 'ಹೆಂಗಸು'. ಬಡತನದ ದಾಂಪತ್ಯ. ತಿರುಪತಿಗೆ ಹೇಳಿಕೊಂಡ ಒಂದು ಹರಕೆಯನ್ನು ಸಲ್ಲಿಸಲಾಗದೆ ಜೀವನವಿಡೀ ಕೊರಗುತ್ತಾರೆ. ತಮ್ಮ ವಂಶದ ಕುಡಿಯಾದ ಮಗಳ ಕ್ಷೇಮಕ್ಕಾಗಿ ಎಲ್ಲವನ್ನೂ ತ್ಯಾಗ ಮಾಡುತ್ತಾರೆ. ಎರಡನೆ ಸಂಬಂಧದವನಿಗೆ ಮಗಳನ್ನು ಮದುವೆಮಾಡಬೇಕಾ ಗುತ್ತದೆ. ಅವಳನ್ನು ಅವನು ಅನುಭವಿಸಿ ಸಣ್ಣ ಕಾರಣ ದಿಂದ ಪರಿತ್ಯಜಿಸುತ್ತಾನೆ. ಅವಳು ಹುಚ್ಚಿಯಾಗಿ ತವರು ಮನೆ ಸೇರುತ್ತಾಳೆ.

"ಆ ನೆನಪು" ಎಂಬ ಕತೆಯಲ್ಲಿ ಅಣ್ಣ ತಂಗಿಯರ ವಿಷಮ ಕಾಮಜೀವನದ ಚಿತ್ರವಿದೆ. ತಂಗಿ ಅಣ್ಣನಿಂದ ಬಸುರಿಯಾಗಿ ತನ್ನ ಬಾಳಿಗೆ ಕೊನೆತಂದು ಕೊಳ್ಳುತ್ತಾಳೆ. ಅಣ್ಣ ತನ್ನ ತಪ್ಪಿಗೆ ಕೊರಗುತ್ತಾನೆ.

"ಕೊನೆಯ ಅಂಕ" ಇನ್ನೊಂದು ಒಳ್ಳೆಯ ಕತೆ. ಒಂದು ಟ್ರೆಜಡಿಯನ್ನು ಬರೆಯಬೇಕೆಂದು ಯಾರೋ ಕೇಳಿರು ತ್ತಾರೆ. ಅದನ್ನು ಬರೆಯುವಾಗ ತನ್ನ ಮನೆಯಲ್ಲೇ ಔಷಧಿಗೂ ಹಣವಿಲ್ಲದೆ ಇದ್ದ ಮುದ್ದು ಮಗು ತೀರಿಹೋಗ ಬೇಕಾಗಿ ಟ್ರೆಜಡಿ ಸಂಭವಿಸುತ್ತದೆ. ''ಪುರುಷನು ಸ್ವಾಭಿಮಾನದಿಂದ ತನ್ನ ಕಹಿಯಾದ ಅನುಭವಗಳನ್ನು ನೀಡಿದರೆ ಸ್ತ್ರೀಯು ನಿರಭಿಮಾನ ದಿಂದ ಅದನ್ನೇ ಸಿಹಿಯಾದ ಅಮೃತವೆಂದು ಗ್ರಹಿಸಿ ತನ್ನ ಭಾವನೆಯನ್ನು ತಿದ್ದಿಕೊಳ್ಳುವಳು. ಸೀತೆಯ ವನವಾಸದಿಂದ

ರಾಮಾಯಣವು ಪರಿಪೂರ್ಣವಾಗಿದೆ.... ಅಲ್ಲವಾದರೆ ಆದಿ ಕವಿಯ ಮಹಾಕಾವ್ಯವು ಅತ್ಯಲ್ಪ!"

'ಸಾಬು' ಎಂಬ ಕತೆ ಈ ಸಂಕಲನದ ಅತ್ಯಂತ ಶ್ರೇಷ್ಠ ಕೃತಿಯಾಗಿದೆ. ಬುಡನ್ ಸಾಬು ಕುರುಡ; ಅವನ ಕೈಗೆಳೆರಡೂ ಮೋಟು. ಸ್ಕಾಬರಕಟ್ಟೆಯ ಮೇಲೆ ಕುಳಿತು ಯಾರಿಗಾದರೂ ಔಷಧ ಕೊಟ್ಟು, ಮಂತ್ರವಾದ ಮಾಡಿ ಜೀವನಯಾಪನೆಯಾಗಬೇಕು. 'ಊರ ಹೆಂಗುಸರು ತಮ್ಮ ಚಿಕ್ಕ ಮಕ್ಕಳನ್ನು ಕರೆದುಕೊಂಡು ಬಂದು ಅವನ ಕಣ್ಣ ಮುಂದೆ ಹಿಡಿದು ಅವನಿಂದ ಮುಟ್ಟಿಸಿ ಬೇರೆ ಕಾಟುದೃಷ್ಟಿ ನಾಟದಂತೆ ಚೀಟುಕಟ್ಟಿಸುವರು.' ಅವನ ಒಬ್ಬನೇ ಪ್ರಾಯ ಬಂದ ಮಗ ಎರಡು ವರ್ಷದ ಹಿಂದೆ ಹಾಳುಹವ್ಯಾಸಕ್ಕೆ ಬಿದ್ದು ಎದುರಾಡಿ ಮನೆಬಿಟ್ಟು ಹೊರಟು ಹೋದ. ಇದರಿಂದ ಸಾಬಿಯ ಬೀಬಿ ಸೊರಗಿದಳು. ಬಡತನದಿಂದ ಇವನ ವೈರಿಗಳು ವಿಜೃಂಭಿಸಿದರು. ಸಾಬಿ ಅಲ್ಲಾನನ್ನು ಪ್ರಾರ್ಥಿಸಿದ. ಅವನ ಎಡಗೈಗೆ ಯಾವುದೋ ದೈವೀಶಕ್ತಿ ಬಂತು. ಅವನು ಕೈಎತ್ತಿದರೆ ಎದುರಿದ್ದ ಜೀವ ಸಾಯುತ್ತಿತ್ತು. ಆ ಕೈಯಿಂದ ನೀರನ್ನು ಕೊಟ್ಟರೂ ಜನರಿಗದು ಅಮೃತಪ್ರಾಯವಾಗುತ್ತಿತ್ತು. ಸಾಬಿಗೆ ಮೊದಲ ಸ್ಥಾನ ಮಾನ ಬಂತು. ಒಂದು ದಿನ ಮಗನ ಕರೆಯನ್ನುಕೇಳಿ ಸಂತೋಷದಿಂದಆಲಿಂಗಿಸಲುಕೈಎತ್ತಿದ; ಮಗ ಮಡಿದುಬಿದ್ದ. ಸಾಬಿ ತನ್ನ ಕೈಯನ್ನು ಕತ್ತರಿಸಿಕೊಂಡ!

'ಸಪ್ತಸಾಗರ' ಶ್ರೀ ವೆಂಕಟರಾಜರ ಎರಡನೆ ಕಥಾಸಂಕಲನ. ಇದು ೧೯೪೭ರಲ್ಲಿ ಪ್ರಕಟವಾಯಿತು. ಇದರ ಹೆಸರೇ ಹೇಳುವ ಹಾಗೆ ಇದರಲ್ಲಿ ಏಳು ಕತೆಗಳಿವೆ. 'ರಾಜಾ-ರಾಣಿ' ಎಂಬ ಮೊದಲನೆಯ ಕತೆಯಲ್ಲಿ ಪರಿಪೂರ್ಣ ಪ್ರಣಯ ಚಿತ್ರವಿದೆ. ಪ್ರಣಯದ ಹೆಸರಿನಲ್ಲಿ ನಾಯಿ ಬೆಕ್ಕುಗಳಾಗುವುದು ಬೇಡ; ಸದ್ಯ ಸ್ವಲ್ಪ ಮನುಷ್ಯರಾಗುವ ಎಂಬ ಪ್ರಜ್ಞೆಯ ಸುತ್ತ ದಂಪತಿಗಳ ಸರಸ ವಿರಸದ ಬಳ್ಳಿ ಇಲ್ಲಿ ಹಬ್ಬಿದೆ.

"ಒಂದು ಕತೆ"ಯಲ್ಲಿ ಹೆಂಗಸಿನ ಅಭಿಮಾನದ ಅಂತರ್ಯದಲ್ಲಿ ದಿವ್ಯ ಜ್ಞಾನದ ಸೆಲೆ ಇದೆ ಎಂಬುದನ್ನು ತೋರಿಸುವ ಸನ್ನಿವೇಶ ವಿದೆ. ಡಾಕ್ಟರ್ ಜಯಕರ್ ಅವರ ಹೆಂಡತಿ ಶಾರದಾದೇವಿ ಸ್ಫುರ ದ್ರೂಪಿನಿ. 'ಆ ನಿಸರ್ಗ ಸೌಂದರ್ಯ ಮಿಂದು ಮಡಿಯುಟ್ಟು ನಿಂತಂತಿದೆ.' ಅವಳಿಗೆ ಮಗುವಾಯಿತು. ಆದರೆ ಮಗುವನ್ನು ಕಣ್ಣೆತ್ತಿ ನೋಡಲೂ ಅವಳಿಗೆ ವ್ಯವಧಾನವಿಲ್ಲ. 'ಮಕ್ಕಳ ಹಿತ ಸಂಘ'ದ ಕಾರ್ಯಕ್ರಮಗಳು. ಒಂದು ದಿನ ಸಂಜೆಯ ಸಭೆಗೆ ಶಾ ರದಾದೇವಿ ಹೋಗಬೇಕಿದ್ದಿತು. ಗಂಡನ ಕಾರು ಸರಿಯಾದ ವೇಳೆಗೆ ಬರಲಿಲ್ಲ. ಅಳುವ ಮಗುವನ್ನು ಬಿಟ್ಟು ಶಾರದಾದೇವಿ ಸಭೆಗೆ ಹೊರಟಳು. ದಾರಿಯಲ್ಲಿ ಭಿಕ್ಷುಕಿ–ಮಗು, ನಾಯಿ–ಮರಿಗಳ ವಾತ್ಸಲ್ಯದ ಚಿತ್ರವನ್ನು ಕಾಣುತ್ತಾಳೆ. ಸಭೆಯಲ್ಲಿ ಆರೋಗ್ಯಕರವಾದ ಶಿಶುಗಳ ಸ್ಪರ್ಧೆ ನಡೆಯುತ್ತಿತ್ತು. ತನ್ನ ಮಗುವನ್ನು ದಾದಿಯು ಎತ್ತಿಕೊಂಡು ವೇದಿಕೆಗೆ ಬಂದಾಗ ಶಾರದಾದೇವಿಯು ಈ ಮಗು ನನ್ನದು ಎಂದಳು. ಕಥೆ ಹೀಗೆ ಅಂತ್ಯವಾಗುತ್ತದೆ. 'ಆ ಕೇರಳ ದೇಶದ ಕನ್ನಿಕೆ ನಿಸರ್ಗ ಸೌಂದ ರ್ಯದ ಪ್ರತಿಮೂರ್ತಿ ಆ ಮೊದಲು ಎಂದೂ ಅಷ್ಟು ಸೊಗಸಾಗಿ ಕಂಡುಬಂದುದಿಲ್ಲ.' ಸಾಂಕೇತಿಕವಾಗಿ ಕತೆಗಾರರು ಹೇಳಿದ್ದಾರೆ.

'ಪುನರ್ಜನ್ಮ' ಎಂಬುದು ಈ ಸಂಕಲನದ ಇನ್ನೊಂದು ಒಳ್ಳೆಯ ಕತೆ. ಮದುವೆಯಾಗಿ ಗಂಡನಿಂದ ಪರಿತ್ಯಕ್ತಳಾಗಿ ಕೆಲಸದಲ್ಲಿರುವ ಮಂಗಳಾದೇವಿಗೆ ಎರಡು ಪತ್ರಗಳು ಬರುತ್ತವೆ. ಒಂದು ಗಂಡನದು— ಮತ್ತೊಂದು ಪ್ರಾಣದ ಗೆಳತಿಯದು. ಗಂಡನದು ಅಭ್ಯರ್ಥನೆಯಾಗಿ, ಗೆಳತಿಯದು ಅನುನಯವಾಗಿ. ಮದುವೆಯ ಧಾರೆಯ ನೀರು ಕೈತಣಿಸಿದಂದಿನಿಂದ ಅವಳ ಹೃದಯವೂ ತಣಿದು ಹೋಗಿದೆ.' ಅಂಥ ಗಂಡನಿಂದ ಬಂದ

ಪತ್ರವಿದು: 'ಮಂಗಳಾ, ಹಿಂದಿನ ಯಾವ ಸಂಗತಿ ಯನ್ನೂ ಈಗ ಎಣಿಸಬೇಡ........ ಆ ಜನ್ಮವೇ ಕಳೆದಿದೆ ಎಂದು ಭಾವಿಸಿ ನನ್ನ ಸಹಾಯಕ್ಕೆ ಬಾ!' ಗೆಳತಿಯಿಂದ ಬಂದ ಕಾಗದವಿದು: 'ಪ್ರಿಯ ಮಂಗಳಾದೇವಿ, ಒಮ್ಮೆಯ ಹಾಳು ನಿರ್ಧಾರ ಮತ್ತೆ ಎಂದೆಂದಿಗೂ ಕೆಡುಕಿಗೇ ಕಾರಣವಾದೀತು.... ನೀನು ತುಂಬಾ ಸಂಬಳ ಕೂಡಿಸಿರಬಹುದೆಂದು ಗ್ರಹಿಸಿರು ವನೋ ಏನೋ........ ನಿನ್ನ ರಾಜೀನಾಮೆಯನ್ನು ಹಿಂದೆ ತೆಗೆದುಕೋ.' ಮಂಗಳೆ ಆದಕ್ಕೆ ಉತ್ತರ ಬರೆದಳು: "ತಪ್ಪನ್ನು ತಪ್ಪಿನಿಂದ ಅಳೆದುನೋಡುವುದು ನೀತಿಯಲ್ಲ. ತಪ್ಪನ್ನು ಅಳೆವ ಕೋಲು ಸಹನೆಯೊಂದೆ! ........ ನಮ್ಮಿಂದ ಏನು ಬೇಕಾಗಿ ದೆಯೊ ಅದನ್ನು ಯಥಾಸತ್ಯವಾಗಿ ಸ್ವಸಂತೋಷದಿಂದ ಕೊಡು ವುದು. ಇದೇ ನಮ್ಮ ಧರ್ಮ....... ನಾನು ವನವಾಸದ ಸೀತೆ ಯಲ್ಲ. ಆದರೆ ನಾವೆಲ್ಲರೂ ಸೀತೆಯ ಒಂದಂಶ. ಅಥವಾ ಮನಸ್ಸು ಮಾಡಿದರೆ ಸೀತೆಯನ್ನು ಮೀರಬಹುದು!"........ 'ನಾಳೆ ಭಾನುವಾರ ಹೊರಡುತ್ತೇನೆ.' ಎಂದು ಪತಿಗೆ ಬರೆದು ಹಾಕಿದಳು. ಪುನರ್ಜನ್ಮ ಪಡೆದಳು.

'ಪಂಚ ಮಹಾಪುರುಷರು' ಎಂಬ ಕತೆಯಲ್ಲಿ ಯಮನ ರಾಜ್ಯದಲ್ಲಿ ಸೇರಿದ ಧರ್ಮಗುರು, ದೇಶಸೇವಾಸಕ್ತ, ಅರ್ಥ ವಿಚಕ್ಷಣ, ಸಮಾಜ ಸುಧಾರಕ, ಪ್ರಸಿದ್ಧ ವಕೀಲರ ವಿಚಾರಣೆ ಯಲ್ಲಿ ಕತೆಗಾರರು ಕಂಡಂತೆ ಬರೆದಿರುತ್ತಾರೆ. ಅವರು ಮಾಡುವ ಅನಾಚಾರಗಳನ್ನೆಲ್ಲ ಬಯಲಿಗೆಳೆದಿದ್ದಾರೆ. ಹೀಗೆ ವೆಂಕಟರಾಜರ ಎರಡು ಕಥಾಸಂಕಲನಗಳಲ್ಲೂ ವಸ್ತು ವೈವಿಧ್ಯ ವಿದೆ. ನಾವು ಕಂಡುಕೊಂಡ ಅನುಭವವನ್ನು ನೇರವಾಗಿ ನಿರೂ ಪಿಸುವ ಕಲೆಗಾರಿಕೆಯೂ, ನಿರ್ದಾಕ್ಷಿಣ್ಯ ಪ್ರವೃತ್ತಿಯೂ ಇದೆ.

೪
# ಕಾದಂಬರಿಗಳು

— ೧ —

ಶ್ರೀ ಎಸ್. ವೆಂಕಟರಾಜರು ಒಟ್ಟು ಮೂರು ಕಾದಂಬರಿಗಳನ್ನು ಬರೆದಿದ್ದಾರೆ. 'ಅಂಬುಜಾಕ್ಷಿ', 'ಧರ್ಮಶಾಲೆ', ಹಾಗೂ 'ತುಂಗಮ್ಮನ ತಪರ್ಮನೆ' ಎಂದು ಆ ಕಾದಂಬರಿಗಳ ಹೆಸರು. ಮೂರೂ ಸಾಮಾಜಿಕ ಕಾದಂಬರಿಗಳು. ಮೂರೂ ನೂರು ಪುಟಗಳಲ್ಲಿ ಮುಗಿಯುವ ಕಾದಂಬರಿಗಳು. ಕಾದಂಬರಿಗಳನ್ನು ಗಾತ್ರವಾಗಿ ಬೆಳೆಯಿಸುವುದರಲ್ಲಿ ಇವರಿಗೆ ನಂಬಿಕೆಯಿಲ್ಲ. ಹೇಳುವುದನ್ನು ನೇರವಾಗಿ ಹೇಳಿದರು, ಮುಗಿಯಿತು. ಈ ದೃಷ್ಟಿಯಿಂದ ಕಾದಂಬರಿಗೆ ಬೊಜ್ಜು ಬೆಳೆಯಬಾರದೆಂದು ವೆಂಕಟರಾಜರು ಹೇಳುತ್ತಾರೆ. ಹೇಳಿದಂತೆ ಬರೆದೂ ತೋರಿಸಿದ್ದಾರೆ.

'ಅಂಬುಜಾಕ್ಷಿ' ಬರೆವ ದೃಷ್ಟಿಯಿಂದ ವೆಂಕಟರಾಜರ ಮೊತ್ತಮೊದಲಿನ ಕಾದಂಬರಿ. ಇದನ್ನು ೧೯೪೪ ಜನವರಿಯಲ್ಲಿ ಬರೆದು ೧೯೫೫ರಲ್ಲಿ ಪ್ರಕಟಿಸಿದರು. "ಸಮಾಜದಲ್ಲಿ ಕೊಳೆಯಾಗಿ ನಿಂತಿರುವ ಸೂಳೆಯ ಸಮಸ್ಯೆಯ ಕುರಿತು ಹಲಹಲವು ಕಾದಂಬರಿಗಳು ತಲೆದೋರಿವೆ. ಆ ಸಮಸ್ಯೆಯನ್ನು ವಿವೇಚನಾತ್ಮಕ ಸೂಕ್ಷ್ಮದೃಷ್ಟಿಯಿಂದ ಕಂಡು ಅದರ ಪರಿಹಾರಕ್ಕಾಗಿ ಹೆಣಗಾಡಿದ ದೃಷ್ಟಿಯ ಉತ್ತಮ ಕೃತಿಗಳು ಹಲವಾಗಿವೆ. ಆದರೂ ಆ ಸಮಸ್ಯೆ ಎಂದಿನಂತೆಯೇ ಎಲ್ಲರ ತಲೆಮರೆಸಿಕೊಂಡು ಇಂದಿಗೂ ಸಮಾಜದ ಸುಂದರೋದ್ಯಾನದಲ್ಲಿ ಬಂದಣಿಕೆಯಂತೆ

ಹಬ್ಬಿ ಬೇರುಬಿಟ್ಟದೆ. .. .... ಆದುದರಿಂದ ಅಂಬುಜಾಕ್ಷಿಯೂ ಒಮ್ಮೆ ಸಮಾಜದ ಮುಂದೆ ತನ್ನ ತಲೆಮುಸುಕನ್ನು ತೆರೆದು ನಿಂತಳೆಂದರೆ ಯಾರಿಗೂ ಬೇಸರ ಬರಲಾರದು ತಾನೆ?'' ಎಂದು ಕಾದಂಬರಿಕಾರರು ಮುನ್ನುಡಿಸಿದ್ದಾರೆ. "ಅಂಬುಜಾಕ್ಷಿಯು ದೋಷಿಯಾದರೂ ನಿರ್ದೋಷಿ" ಎಂಬುದು ಕಾದಂಬರಿಕಾರರ ನಿಲುವು.

ಈ ಕಾದಂಬರಿಕಾರರು ಒಂದೊಂದು ಅಧ್ಯಾಯಕ್ಕೂ ಒಂದೊಂದು ತಲೆಬರಹವನ್ನಿತ್ತು ಬರೆಯುತ್ತಾರೆ. ಹಾಗೆ ಹನ್ನೊಂದು 'ಎಸಳು'ಗಳಿವೆ. 'ಅಂಬುಜಾಕ್ಷಿ'ಯಲ್ಲಿ 'ತೆರೆದ ಬಾಗಿಲಿ'ನಿಂದ ಆರಂಭವಾಗಿ 'ಪೂರ್ಣಾಹುತಿ'ಯಲ್ಲಿ ಮುಕ್ತಾಯ ವಾಗುತ್ತದೆ. ಅಂಬುಜಾಕ್ಷಿ ಸಿಲ್ಕುಸುಂದರಿ ಎಂಬ ಸೂಳೆಯ ಮಗಳು; ವಿದ್ಯಾವಂತೆ. ಅವಳಿಗೆ ತಾಯಿಯ ಬಾಳಿನಲ್ಲಿ ಜಿಗುಪ್ಸೆ. ಆದರೂ ಕಾಣದ ಕೈಯೊಂದು ಆವಳನ್ನು ಆ ಪಾಪ ಕೂಪಕ್ಕೆ ತಳ್ಳಿತು. ಮಳೆಗೆ ಆಶ್ರಯವನ್ನು ಪಡೆಯಲು ನಿಂತುದು ಶ್ರೀಧರಮೂರ್ತಿಯ ಪಾಪಕರ್ಮವಾಯಿತು.

ಶ್ರೀಧರಮೂರ್ತಿ ಸರಕಾರೀ ಆಫೀಸಿನ ಕಾರಕೂನನಾಗಿ ದ್ದವನು. ಅಂಬುಜಾಕ್ಷಿಯನ್ನು ಸುಲಭವಾಗಿ ಸುಖಿಸಿ, ಸಂತಾ ನದ ಮುನ್ನುಡಿಯಿಟ್ಟು ವರ್ಗವಾಗಿ ಬೇರೆ ಊರಿಗೆ ಹೋದ. ಅಂಬುಜಾಕ್ಷಿ ಮತ್ತೆ ಬಂದಾನೆಂದು ನಂಬಿದಳು. ಅವನಿಂದ ಹುಟ್ಟಿದ ಮಗನನ್ನು ಹಡೆದಳು. ಆದರೂ ದೂರದ ಆಸೆ ಯಿಂದ ಕಾದುನಿಂತಳು. ಶ್ರೀಧರಮೂರ್ತಿ ಬೇರೆ ಊರಿನಲ್ಲಿ ಹೊಟೆಲ್ ಮಾಲಿಕನ ಶ್ರೀಮಂತ ಕನ್ಯೆಯನ್ನು ಕೈಹಿಡಿದು ಮಕ್ಕಳನ್ನು ಪಡೆದು ಮತ್ತೆ ಅಂಬುಜಾಕ್ಷಿಯ ಊರಿಗೆ ಮೆಜಿ ಸ್ಟ್ರೇಟ್ ಆಗಿ ಬರುತ್ತಾನೆ. ಅಷ್ಟರಲ್ಲಿ ಅಂಬುಜಾಕ್ಷಿ ತನ್ನ ತಾಯಿಯನ್ನು ಕಳೆದುಕೊಂಡು ಉದರನಿರ್ವಹಣೆಗಾಗಿ ಕುಲ

ವೃತ್ತಿಯನ್ನು ಮಾಡಿ ಅದೇ ಕೋರ್ಟಿಗೆ ಶಿಕ್ಷೆಗಾಗಿ ಬರುತ್ತಾಳೆ. ಶ್ರೀಧರಮೂರ್ತಿ ಕ್ಷಮಿಸಿ ಬಿಟ್ಟುಬಿಡುತ್ತಾನೆ. ಆವಳ ಮಗ ಕೃಷ್ಣಮೂರ್ತಿ, ಶ್ರೀಧರಮೂರ್ತಿಯ ಮಗ ದೇವ ಒಂದೇ ರೀತಿ ಕಾಣುತ್ತಾರೆ. ಅಂಬುಜಾಕ್ಷಿಯ ಸರ್ವಸ್ವವೆನಿಸಿದ್ದ ಕೃಷ್ಣ ಮೂರ್ತಿ ಲಾರಿ ಅಪಘಾತಕ್ಕೆ ತುತ್ತಾಗಿ ಅಸುನೀಗುತ್ತಾನೆ. ಆದಕ್ಕೆ ಶ್ರೀಧರಮೂರ್ತಿಯೇ ಕಾರಣನಾಗಿ ಮಾನಸಿಕ ವ್ಯಥೆ ಗೊಳಗಾದನು. ಅಂಬುಜಾಕ್ಷಿ ಎಲ್ಲವನ್ನೂ ಕಳೆದುಕೊಂಡು ಕೊನೆಯಲ್ಲಿ ಬಯಸುವುದು ಇಷ್ಟನ್ನು: "ಎಲ್ಲಾದರೂ ನೆನ ಪಿದ್ದರೆ ಸಮಯವಾದಾಗ ಈಕಡೆ ನಿಮ್ಮ ಹುಡುಗನೊಂದಿಗೆ ಬಂದು ದರ್ಶನಕೊಟ್ಟು ಹೋಗುತ್ತಿರಬೇಕಾಗಿ ಬೇಡಿಕೊಳ್ಳು ತ್ತೇನೆ" ಹೀಗೆ ಕೇಳುವುದು ಶ್ರೀಧರಮೂರ್ತಿಯನ್ನಲ್ಲ; ಆವನ ಹೆಂಡತಿ ವಸುಮತಿಯನ್ನು!

ಕಾದಂಬರಿಯನ್ನು ಲೇಖಕರು ಕಲಾತ್ಮಕವಾಗಿ ಹೆಣೆ ದಿದ್ದಾರೆ. ಅಂಬುಜಾಕ್ಷಿಯ ಮನೆಯಲ್ಲಿ ಹಾಕಿದ ಕಸೂತಿಯ ಚಿತ್ರಗಳಾದ ವಿಶ್ವಾಮಿತ್ರ-ಮೇನಕೆ, ತಾಯ ಜತೆಯಲ್ಲಿ ನಿಂತಿದ್ದ ಒಂದು ಜಿಂಕೆಯ ಮರಿಯ ಮೇಲೆ ನೆಗೆಯಲು ಹೊಂಚುತ್ತಿದ್ದ ಹುಲಿ, ಮಧ್ಯೆ ಮಧ್ಯೆ ಉದ್ಧೃತವಾದ ಕಾಳಿ ದಾಸನ ಮೇಘದೂತದ ವೃತ್ತಗಳು, 'ಮಳೆಗಾಲದ ಮೊದಲ ಹನಿ ಪ್ರಾಯಕ್ಕೆ ಬರುವ ಹುಡುಗಿಯರ ಹುಚ್ಚುನಗೆಯಂತೆ ಎಲ್ಲಾ ನೀರೇ, ಎಲ್ಲಾ ತಂಪೇ!' ಎಂಬಂತಹ ವರ್ಣನೆ— ಇವೆಲ್ಲ ಕಾದಂಬರಿಯ ವಸ್ತುವಿನೊಡನೆ ಔಚಿತ್ಯಪೂರ್ಣವಾಗಿ ಹೊಂದಿಕೊಂಡಿವೆ.

'ತನ್ನ ಮನಸ್ಸು ಕುದಿದಿದ್ದರೆ ಅಲ್ಲಿ ಅವನ ಮನಸ್ಸೂ ಕಾದಿರಬೇಕು. ಅದಲ್ಲವಾದರೆ ಆ ಪಾಷಾಣದ ಮೇಲೆ ಏಕೆ ನೀರು ಸುರಿಯಬೇಕು!'

*   *   *

'ಹೆಣ್ಣಿನ ಮುಂದೆ ಪ್ರಪಂಚದ ಯಾವ ನಿರ್ಧಾರವೂ ನಿಲ್ಲುವುದಿಲ್ಲ.'

* * *

'ನಕ್ಷತ್ರಗಳು ದೊಡ್ಡವಿರಬಹುದು. ಆದರೆ ಮಹತ್ತರವಾದ ಆಕಾಶದಲ್ಲಿ ಅವುಗಳು ಚಿಕ್ಕಚಿಕ್ಕ ಗುಳಿಗೆಗಳು.'

* * *

ಅಂಬುಜಾಕ್ಷಿ: 'ನಾಳೆ ರಾಮಾಯಣ ತಂದು ಮೇಜಿನ ಮೇಲಿಡಲೇ?'

ಶ್ರೀಧರಮೂರ್ತಿ: 'ಬೇಡ, ಮಹಾಭಾರತವಾದೀತು!– ಇದು ಅಂಬುಜಾಕ್ಷಿಯು ಬಾಳಿನ ದುರಂತದ ಪ್ರತೀಕವಾಗಿರುವುದು ಹೃದಯಂಗಮವಾಗಿದೆ.

* * *

'ಹೂವನ್ನು ಹೂವಿನಂತೆ ಹಗುರಾಗಿ ಹಿಡಿಯದೆ ಹೋದರೆ ಅದು ಬಾಡಿ ಬಿದ್ದು ಹುಡಿಹುಡಿಯಾಗುವುದು.'

* * *

'ಸೂಕ್ಷ್ಮವಾಗಿ ನೋಡಿದರೆ ಸಮಾಜದಲ್ಲಿ ಯಾರು ಸೂಳೆಯಲ್ಲ?'

* * *

'ಒಮ್ಮೊಂದೊಮ್ಮೆ ಮಹಾಪತಿವ್ರತೆ ಸೂಳೆಯಾದರೂ ಅವಳನ್ನು ಸೂಳೆ ಎನ್ನುವವರಿದ್ದಾರಿಯೇ?'

* * *

'ಪ್ರೀತಿಯು ಕತ್ತಲುಕೋಣೆಯ ದೀಪದಂತೆ! ಕತ್ತಲು ಹೆಚ್ಚಿದಷ್ಟು ದೀಪದ ಪ್ರಭೆಯೂ ಹೆಚ್ಚುವುದು.'

* * *

ಕಾದಂಬರಿಯ ವಸ್ತು, ಪಾತ್ರವನ್ನು ಬೆಳಗಿಸುವ ಇಂಥ ಮಹಾವಾಕ್ಯಗಳು ಕಾದಂಬರಿಯನ್ನು ಅಚ್ಚುಕಟ್ಟಾಗಿಸಿವೆ.

ಶ್ರೀಧರ ಮೂರ್ತಿ ಅದೇ ಊರಿಗೆ ಮೆಜಿಸ್ಟ್ರೇಟನಾಗಿ ಬಂದುದು, ಅವನು ಕೃಷ್ಣಮೂರ್ತಿ ಅಂಬುಜಾಕ್ಷಿಯಲ್ಲಿ ಹುಟ್ಟಿದ ತನ್ನ ಮಗನೆಂದು ತಿಳಿದೂ ಆವನನ್ನು ಸೈಕಲಿನ ಮೂಲಕ ಲಾರಿಗೆ ತಳ್ಳಿ ಅವನ ಅಪಘಾತಕ್ಕೆ ಕಾರಣನಾದುದು ಕಾದಂಬರಿಯ ಬೆಳವಣಿಗೆಯಲ್ಲಿ ತುಂಬ ಕೃತಕಗಳಾಗಿ ಕಾಣಿಸುತ್ತವೆ. ಇದನ್ನು ಬಿಟ್ಟರೆ 'ಅಂಬುಜಾಕ್ಷಿ' ಶ್ರೀ ವೆಂಕಟರಾಜರ ಹೊಸ ದೃಷ್ಟಿಯ ಕಾದಬರಿಯಾಗಿದೆ.

— ೨ —

'ಧರ್ಮಶಾಲೆ' ಶ್ರೀ ವೆಂಕಟರಾಜರ ಎರಡನೆಯ ಕಾದಂಬರಿ. ಇದನ್ನು ೧೯೪೪ರ ಫೆಬ್ರವರಿಯಲ್ಲಿ ಬರೆದು ೧೯೫೬ರಲ್ಲಿ ಪ್ರಕಟಿಸಿದರು. 'ಧರ್ಮಶಾಲೆ' ಧರ್ಮದ ಹೆಸರಿನಲ್ಲಿ ಆಗುವ ಅಧರ್ಮ, ಪಾಪ, ನೀಚತನವನ್ನು ಚಿತ್ರಿಸಲು ಹೊರಟ ಕಾದಂಬರಿ. "ಯಾವ ಶಿಶುವಿಗಾದರೂ ಬೆಳವಣಿಗೆಯು ಒಂದು ಕಾಲವಿದ್ದೇ ಇದೆ. ಆ ತನಕ ಮಗುವು ನಗ್ನವೇಷದಿಂದ ತಿರುಗುತ್ತಿದ್ದರೆ ಯಾರೂ ಹೇಸಲಾರರು. ಆದರೆ ಆನಂತರವೂ ಹಾಗೆಯೇ ಬತ್ತಲೆ ಬರಿದು ತಿರುಗುವುದೆಂದರೆ ಅಪಹಾಸ್ಯವಾಗದಿರದು.... ಧರ್ಮಶಾಲೆಯಲ್ಲಿ ಆಕ್ಷೇಪಿಸಿರುವುದು ಧರ್ಮವನ್ನಲ್ಲ– ಧರ್ಮದ ದುಂದುಗಾರಿಕೆಯನ್ನು. ನಿರ್ಮಲವಾದ ಆಶ್ರಮ ಧರ್ಮವನ್ನಲ್ಲ— ಅದರ ಅವಹೇಳನದ ಆಭಾಸವನ್ನು! ಧರ್ಮದ ಹೂದೋಟದಲ್ಲಿ ಸತ್ಪ್ರವೃತ್ತಿಯ ಸಚ್ಚರಿತೆಯ ಸೌರಭದ ಸುಖಾಸ್ವಾದವೇ ಹಬ್ಬಬೇಕೇ ಹೊರತು ಹೊಲಸು ಹಾವಿನ ಹೆಚ್ಚಳವಲ್ಲ "ಎಂದು ಕಾದಂಬರಿಕಾರರು ಮುನ್ನುಡಿಯಲ್ಲಿ ಹೇಳಿದ್ದಾರೆ.

ಈ ಕಾದಂಬರಿಯ ಅಧ್ಯಾಯಗಳನ್ನೂ 'ಕುಸುರು' ಎಂದು ಬೇರೆ ಬೇರೆ ಹೆಸರಿಟ್ಟಿದ್ದಾರೆ. ಶ್ರೀನಿವಾಸರಾಯರು ಹಳೆಯ ಸಂಪ್ರದಾಯದ ಮನುಷ್ಯ. ಅವರಿಗೆ ಊರಿನ ಜಮೀನ್ದಾರಿಕೆಯಿದೆ. ಹಾಗಾಗಿ ಅವರ ಸುತ್ತುಮುತ್ತ ಇರುವವರೆಲ್ಲ ಅವರನ್ನು ಒಂದಲ್ಲ ಒಂದು ರೀತಿಯಿಂದ ಆಶ್ರಯಿಸಿಕೊಂಡಿದ್ದಾರೆ. ಅವರು ಗಾಂಧೀ ವಿರೋಧಿ; ಮಗ ಕೃಷ್ಣಸ್ವಾಮಿ ಅಪ್ಪಟ ಗಾಂಧೀವಾದಿ. ಅವನೊಬ್ಬನೇ ಮಗ. ರಾಯರ ಹೆಂಡತಿ ಎಳೆಯ ವಯಸ್ಸಿನಲ್ಲೇ ತೀರಿ ಹೋಗಿದ್ದಳು. ಕೃಷ್ಣಸ್ವಾಮಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದ. ಶ್ರೀನಿವಾಸರಾಯರು ಮೂರು ಸಾವಿರ ರೂಪಾಯಿ ಕಂದಾಯ ಕೊಡುವವರಾಗಿದ್ದರೆ ಕೇಶವಯ್ಯ ಮೂವತ್ತುರೂಪಾಯಿಗಳ ಪೆನ್ಶನ್ ಪಡೆಯುವವನು. ಅವನ ಮಗಳು ಶಾರದೆಯಲ್ಲಿ ಕೃಷ್ಣಸ್ವಾಮಿಗೆ ನಾಲ್ಕು ವರ್ಷಗಳಿಂದಲೂ ಒಳಕೆ. ಕೇಶವಯ್ಯ ಜೀವನದಲ್ಲಿ ಬೇಸರ ಬಂದು ಪೇಟೆಗೆ ಶರಣು ಹೊಡೆದು ಈ ಹಳ್ಳಿ ಸೇರಿದವ. ಅವನದು ಬಡ ಸಾತ್ತ್ವಿಕ ಸಂಸಾರ. 'ಶಾರದೆಯಿಂದು ಹನ್ನೆರಡು ವರ್ಷಗಳ ಬಾಲಿಕೆಯಲ್ಲ. ಅವಳ ಮೃದು ಮೈ ತುಂಬಿ ಹಿಡಿಯಲಾರದಷ್ಟು ಸೌಂದರ್ಯವು ಹೊರಸೂಸ ತೊಡಗಿದೆ..ಪ್ರಾಯವು ಅವರ ಮಧ್ಯೆ ಪರದೆ ಹಿಡಿದು ಛಾಳಿಸುತ್ತಿದ್ದಿತು.' ಅವರಿಬ್ಬರಲ್ಲಿ ಯಾರು ಬಂದರೂ ಬಿಡಿಸಲಾರದ ಪ್ರೇಮ ಬಲಿಯಿತು.

೧೯೪೨ರ ಕ್ರಾಂತಿಯಲ್ಲಿ ಭಾಗವಹಿಸಿ ಕೃಷ್ಣಸ್ವಾಮಿ ಜೈಲು ಶಿಕ್ಷೆ ಅನುಭವಿಸಿದ. ಇದರಿಂದ ಸಂತೋಷ ಪಟ್ಟವರು ಕೇಶವಯ್ಯ ಶಾರದೆ. ಆಷಾಢ ಮಾಸದಲ್ಲಿ ಚಾತುರ್ಮಾಸಕ್ಕಾಗಿ ಯಾವುದೋ ಮಠದ ಸ್ವಾಮಿ ತನ್ನ ಪರಿವಾರದೊಂದಿಗೆ ಗೌಜು ಗದ್ದಲದೊಂದಿಗೆ ಆ ಧರ್ಮನ ಹಳ್ಳಿಗೆ ಬಂದು ಧರ್ಮ ಪ್ರವಚನ, ಹರಿಕಥೆ, ಸಮಾರಾಧನೆ ಎಲ್ಲ ನಡೆದುವು. "ತಮ್ಮ ಅಗಾಧವಾದ ೨೦ಲ

ರಾತಲಿನ ಪವಿತ್ರವಾದ ದೇಹ ಭಾರವನ್ನು ಹೊತ್ತು ಧರ್ಮ ಪ್ರಚಾ ರಾರ್ಥವಾಗಿ ಆ ಹಳ್ಳಿಗೆ ಆಗಮಿಸಿರುವರು!" ಸ್ವಾಮಿಯ ಪ್ರಸಾದ, ಆಶೀರ್ವಾದಕ್ಕಾಗಿ ಊರಿಗೆ ಊರೇ ನೆರೆಯಿತು. ಕೇಶ ವಯ್ಯ ಮಾತ್ರ ಬರಲಿಲ್ಲ. ಸ್ವಾಮಿ ತನ್ನ ಪಾರುಪತ್ಯದಾರನನ್ನು ಕಳುಹಿಸಿ ಕೇಶವಯ್ಯನನ್ನೂ, ಅವನ ಮಗಳನ್ನೂ ಧರ್ಮಶಾಲೆಗೆ ಬರಹೇಳಿದ. ಕೇಶವಯ್ಯ ಅಲ್ಲಾಡಲಿಲ್ಲ.

ಸ್ವಾಮಿಗೆ ಪಾರುಪತ್ಯದಾರ ವಿಠಲಾಚಾರ್ಯನಿಂದ ತನಗೆ ಬೇಕಾದ ಶಾರದೆ ದೊರೆಯುದುದರಿಂದ ಗಿಂಡಿಮಾಣಿಯನ್ನು ಆ ಸ್ಥಾನಕ್ಕೇರಿಸಿ ವಿಠಲಾಚಾರ್ಯನನ್ನು ಓಡಿಸಿದ. ಅವನು ತನ್ನ ಆಸ್ತಿಮನೆಯನ್ನೆಲ್ಲ ಮಠಕ್ಕೆ ಬರೆದು ಹಾಕಿದ್ದ. ಅದು ದೊರೆ ಯದೆ ಅವನು ಕಂಗಾಲಾದ. ಅವನು ಕೇಶವಯ್ಯನ ಆಶ್ರಯ ಪಡೆದ. ತನ್ನ ತೀರಿಹೋದ ಮಗಳನ್ನು ಶಾರದೆಯಲ್ಲಿ ಕಂಡ. ವಿಠಲಾಚಾರ್ಯ ಸ್ವಾಮಿಯ ಚಲನವಲನವನ್ನು ರಹಸ್ಯವಾಗಿ ಪರಿ ಶೀಲಿಸಿ ಶ್ರೀನಿವಾಸರಾಯರೊಡನೆ ವಿಷಯ ತಿಳಿಸಿದ. ಇಷ್ಟರಲ್ಲೇ ಶ್ರೀನಿವಾಸರಾಯರಿಂದ ಕೇಶವಯ್ಯ ಮನೆ ಖಾಲಿ ಮಾಡಿಬಿಡ ಬೇಕೆಂದು ಸ್ವಾಮಿ ತಂತ್ರ ಹೂಡಿದ. ಹಾಗೆ ರಾತ್ರಿ ಹೊತ್ತು ಗಾಡಿಕಟ್ಟಿ ಹೋಗುವಾಗ ಸ್ವಾಮಿ ಶಾರದೆಯ ಮಾನಭಂಗಕ್ಕೆ ಪ್ರಯತ್ನಿಸಿದ. ಆದರೆ ಸಾಧ್ಯವಾಗದೆ ಹೇಳದೆ ಕೇಳದೆ ರಾತ್ರಾ ರಾತ್ರಿ ಕಾಲಿಗೆ ಬುದ್ಧಿ ಹೇಳಿದ. ಶ್ರೀನಿವಾಸರಾಯರಿಗೆ ಬುದ್ಧಿ ಬಂದು ಕೃಷ್ಣಸ್ವಾಮಿಗೂ ಶಾರದೆಗೂ ಅವರ ಇಚ್ಛೆಯಂತೆ ಮದುವೆ ಮಾಡಿಸಿದ. ಇದಕ್ಕೆ ವಿಠಲಾಚಾರ್ಯ ನೇತಾರನಾದ. ಇದು ಕಾದಂಬರಿಯ ಹಂದರ.

ಇದರಲ್ಲಿ ಧರ್ಮಶಾಲೆಯಲ್ಲಿ ನಡೆಯುವ ಬೂಟಾಟಿಕೆ ಯನ್ನು ಕಾದಂಬರಿಕಾರರು ಪರಿಣಾಮಕಾರಿಯಾಗಿ ಬಯಲಿಗೆಳೆ

ದಿದ್ದಾರೆ. ಕಾವಿಸಾಟಿಯ ಸ್ವಾಮಿ ಕಾಮಿಯಾಗದಿರುವುದು ಸಾಧ್ಯವಾಗಲಿಲ್ಲ. ಯಾವ ಹಳ್ಳಿಯ ಜನ ಮುಗ್ಧ ಮನಸ್ಸಿನಿಂದ ಸ್ವಾಮಿಯನ್ನು ಸಾಕ್ಷಾತ್ ಭಗವಂತ ಸ್ವರೂಪವೆಂದು ತಿಳಿಯಿತೋ ಅದೇ ಜನ ಅವನನ್ನು ಊರಿನಿಂದ ಹೊಡೆದು ಓಡಿಸಲು ಬಯಸುವಂತಾಯಿತು.

* * *

"ಯಾವ ತಂದೆಯೂ ಮಗನಿಗೆ ವಿಷ ಕೊಟ್ಟಿಲ್ಲ. ಆದರೆ, ಕೊಟ್ಟ ಹಾಲೇ ಅಸಂದರ್ಭವಾಗಿ ಅಜೀರ್ಣಗೊಂಡು ವಿಷವಾಗಿರಬಹುದು."

* * *

"ಕೇಶವಯ್ಯನವರ ಸ್ವಭಾವವೆಂದರೆ ಅದೊಂದು ದೊಡ್ಡ ಸಮುದ್ರದ ಹಾಗೆ. ಅದರಲ್ಲಿ ಏನು ಕಸ ಬಿದ್ದರೂ ಅದು ಒಡನೆಯೇ ದಡಸೇರಿ ಗಂಭೀರವಾಗಿರುತ್ತಿದ್ದಿತು."

* * *

"ಮಕ್ಕಳಿಗೆ ತಾಯಿ ಇಲ್ಲದಿರುವುದು ಒಂದು ಶಾಪ."

* * *

"ಡಂಭಾಚಾರವಿಲ್ಲದೆ ಧರ್ಮವಿಲ್ಲ. ಧರ್ಮಕ್ಕೆ ಈ ತಲೆ ಪಟ್ಟಿಗಳೆಲ್ಲಾ ಬೇಕಾಗಿಲ್ಲ. ಆದರೆ ಮನುಷ್ಯನಿಗೆ ಸ್ವಾರ್ಥಕ್ಕಾಗಿ ಬೇಕಾಗಿದೆ ಈ ವ್ಯವಸಾಯ. ಸಂನ್ಯಾಸಿಗೆ ತನ್ನ ಆತ್ಮೋದ್ಧಾರಕ್ಕಾಗಿ ಯಮ ನಿಯಮ ಪ್ರಾಣಾಯಾಮಗಳು ಬೇಕಾಗಿಲ್ಲ—ಬೇರೆಯವರಿಗಾಗಿ ಉಪನ್ಯಾಸವು ಬೇಕಾಗಿದೆ. ಇಡೀ ರಾತ್ರಿ ಉಪದೇಶ ಮಾಡುವ ಹರಿದಾಸನಿಗೆ ಭಕ್ತಿಯು ಬೇಕಾಗಿಲ್ಲ—ಮನೋರಂಜನೆಯು ಬೇಕಾಗಿದೆ. ಬೆಳಗ್ಗಿನ ಪುರಾಣಿಕನಿಗೆ ಪುರಾಣವು ಆಚರಣೆಗಾಗಿ ಬೇಕಾಗಿಲ್ಲ—ಇದಿರಿನ ಹರಿವಾಣ

ತುಂಬುವುದಕ್ಕಾಗಿ ಮಾತ್ರ! ಜನರಿಗೆ ಇದಾವುದೂ ಬೇಕಾಗಿಲ್ಲ–ಮಧ್ಯಾಹ್ನದ ಮೃಷ್ಟಾನ್ನ ಭೋಜನ ಮಾತ್ರ!”

*  *  *

ಶ್ರೀವೆಂಕಟರಾಜರು ಉಡುಪಿಯ ಕೆಲವು ಮಠಗಳಸ್ವಾಮಿಗಳ ಪೂರ್ವಾಶ್ರಮದ ಪ್ರಕಾರ ಹತ್ತಿರದ ಬಂಧುಗಳು, ಉಡುಪಿಯಲ್ಲೇ ನೆಲೆಸಿದವರು. ಆದರೂ ಧರ್ಮದ ಹೆಸರಿನಲ್ಲಿ ಆಗುವ ಅನ್ಯಾಯವನ್ನು ಯಾರು ಮಾಡಿದರೂ ಅದು ಹೇಯ ಎಂದು ಈ ಕಾದಂಬರಿಯಲ್ಲಿ ಚಿತ್ರಿಸಿರುವುದು ಅವರ ನಿರ್ದಾಕ್ಷಿಣ್ಯ ಮನೋವೃತ್ತಿಗೆ, ಸತ್ಯ ಪಕ್ಷಪಾತಕ್ಕೆ ಸಾಕ್ಷಿಯಾಗಿದೆ. ಕಾದಂಬರಿಯ ಒಂದೊಂದು ಪಾತ್ರವನ್ನೂ ಮರೆಯುವುದು ಕಷ್ಟ.

— ೩ —

‘ತುಂಗಮ್ಮನ ತಮ್ಮರ್ನೆ’ ಶ್ರೀ ವೆಂಕಟರಾಜರ ಮೂರನೆಯ ಕಾದಂಬರಿ, ಇದನ್ನು ೧೯೩೪ರಲಿ ಬರೆದು ೧೯೩೬ರಲ್ಲಿ ಪ್ರಕಟಿಸಿದರು. “ಕವಿಯು ತನ್ನ ಕುತೂಹಲ ದೃಷ್ಟಿಯನ್ನು ಹಳ್ಳಿಯ ಕಡೆ ಹರಿಸಿದಾಗ ಇಂತಹ ಸಂದರ್ಭ ಸನ್ನಿವೇಶಗಳನ್ನು ಪ್ರತಿ ಹಳ್ಳಿಯಲ್ಲೂ ಕಂಡೇ ಕಾಣುವನು. ತುಂಗಮ್ಮ ಒಂದು ಹಳ್ಳಿಯ ಒಂದು ವ್ಯಕ್ತಿಯಲ್ಲ - ಎಲ್ಲ ಹಳ್ಳಿಗಳ ಸರ್ವಸಾಮಾನ್ಯ ವ್ಯಕ್ತಿ. ಅವಳ ಸುಖದುಃಖದ ಮಿಡಿತ ಎಲ್ಲಾ ಹಳ್ಳಿಗಳ ಅಂತಹ ಹೆಣ್ಣುಗಳ ಹೃದಯದ ಮಿಡಿತವಾಗಿದೆ........ತುಂಗಮ್ಮನಂತಹ ನಿರಾಡಂಬರದ ಹೆಣ್ಣು, ಸುಬ್ಬಣ್ಣನಂತಹ ಸರಳಜೀವಿ, ಕಾವೇರಿಯಂತಹ ಕಾಲುಜಾರಿದರೂ ವ್ಯಕ್ತಿತ್ವವನ್ನು ಕಳೆದುಕೊಳ್ಳದ ಹೆಂಗುಸು, ರಾಮಿಯಂತಹ ಸಿಡುಕುಗಾರ್ತಿ, ಗೌರಿಯಂತಹ ಹಳ್ಳಿಯ ಉಪಯುಕ್ತ ಜನರು........” ಇದರಲ್ಲಿ

ಇದ್ದಾರೆ ಎಂದು ಕಾದಂಬರಿಕಾರರು ಮುನ್ನುಡಿಯಲಿ ಹೇಳಿ ದ್ದಾರೆ. ಈ ಕಾದಂಬರಿಯಲ್ಲಿ ಲೇಖಕರು ಹಳ್ಳಿಯ ಜೀವನ ವನ್ನು ಸಹಜಸುಂದರವಾಗಿ, ಹಳ್ಳಿಯ ಬಾಳಿಗೇ ರಟ್ಟು ಕಟ್ಟಿ ಪುಸ್ತಕಮಾಡಿದಂತೆ ಚಿತ್ರಿಸಿದ್ದಾರೆ; ನೂರು ಪುಟದ ಈ ಚಿಕ್ಕ ಕಾದಂಬರಿ ಚೊಕ್ಕವಾಗಿದೆ. ಈ ಕಾದಂಬರಿಯನ್ನು ಏಳು 'ಹೆಜ್ಜೆ'ಗಳಲ್ಲಿ ವಿಸ್ತರಿಸಿದ್ದಾರೆ. ಒಂದೊಂದು ಹೆಜ್ಜೆಗೂ ಹೆಸರು ಕೊಟ್ಟಿದ್ದಾರೆ.

ತುಂಗಮ್ಮನ ತಾಯಿ ಕಾವೇರಿ ಅವಳನ್ನು ಹಳ್ಳಿಯ ಕೊಂಪೆಯಾದರೂ ಒಂದು ದೊಡ್ಡ ಕುಟುಂಬಕ್ಕೆ ಹೊಂದಿಸಿ ಕೊಟ್ಟಿದ್ದಾಳೆ. ಆ ಒಂದೇ ಮನೆಯಲ್ಲಿ ದಿನವೊಂದಕ್ಕೆ ಒಂದು ಸೇರು ಉಪ್ಪು ಖರ್ಚಾಗುವ ಅಳಿಯಗಟ್ಟಿನ ಬೇಸಾಯಗಾರರ ಮನೆ. ಕಾವೇರಿ ತುಂಗಮ್ಮನನ್ನು ಪಡೆದ ಸ್ವಲ್ಪ ಸಮಯ ದಲ್ಲೇ ತನ್ನ ಗಂಡನನ್ನು ಕಳೆದುಕೊಂಡುದರಿಂದ ಒಂದು ಒಳ ಬೇಸಾಯವನ್ನು ಮಾಡಿಕೊಂಡು ಕಾಲಕ್ಷೇಪ ಮಾಡುತಿದ್ದಳು. ಆದರೂ ಒಬ್ಬಂಟಿ ಹೆಣ್ಣು ಹೆಂಗಸು ಎಷ್ಟು ದುಡಿದರೂ ಖರ್ಚಿಗೆ ಸಾಕಾಗದೆ ಸಾಲ ಬೆಳೆಯಿತು. ಈ ಸಮಯವನ್ನು ನಿರೀಕ್ಷಿಸಿ ಐತಣ್ಣನೆಂಬ ಆ ಊರಿನ ಗೂಳಿ ಕಾವೇರಿಗೆ ಉಪಕಾರ ಮಾಡಲು ಬಂದ. "ಅದೊಂದು ಕೆಟ್ಟಗಳಿಗೆ! ತುಂಗಮ್ಮನನ್ನು ಮದುವೆಮಾಡಿ ಕೊಟ್ಟಂದಿನಿಂದ ಅವಳ ಮನೆ ಖಾಲಿಯಾಗುತ್ತ ಬಂದಿದೆ. ಅವಳ ಬೆನ್ನ ಕಡೆ ಸುಳಿ, ಹೋದ ಮನೆಗೆ ಬೆಳೆ ಯನ್ನೂ ಹೊರಟ ಮನೆಗೆ ಕಳೆಯನ್ನೂ ತುಂಬಿಸುವುದು. ಆದುದರಿಂದಲೇ ಆ ವರ್ಷ ಅವಳ ಅಗೆ ಹಾಳಾಗಿ ಕಳೆತುಂಬಿ ಬೆಳೆಕೆಟ್ಟುಹೋಗಿದೆ." ಒಂದು ದಿನ ರಾತ್ರಿ ಕಾವೇರಿ ಬಚ್ಚಲಮನೆಯಲ್ಲಿ ಬಿಸಿನೀರು ಮೀಯುತ್ತಿದ್ದಾಗ ಒಮ್ಮಿಂದೊಮ್ಮೆಗೆ ಗುಡಾಣದ ಹಿಂದಿನಿಂದ

ಐತಣ್ಣ ಪ್ರತ್ಯಕ್ಷನಾಗಲು ಕಾವೇರಿ ಕಕ್ಕಾಬಿಕ್ಕಿಯಾದಳು. 'ಆ ಊರಿನ ಹಲವು ಹೆಣ್ಣುಗಳ ಕರಿಮಣಿ ತಾಳಿಯ ಮಧ್ಯದಲ್ಲಿ ಅವನ ಹಣ ಕಿಣಿ ಕಿಣಿ ಸದ್ದುಮಾಡಿ ಹಣಕುತಿದ್ದಿತು.' ಐತಣ್ಣ ಏನು ಹೇಳಿದರೂ ಕೇಳಲಿಲ್ಲ. ಕಾವೇರಿ ಅವನ ಕಾಮಕ್ಕೆ ಬಲಿ ಪಶುವಾದಳು. 'ಆ ಬಚ್ಚಲ ಕೊಟ್ಟಿಗೆಯಲ್ಲಿ ಅವಳಿಗೆ ಮೊದಲ ಬಾರಿಗೆ ಪಾಪದ ಪೂರ್ಣಾಭ್ಯಂಜನವಾಯಿತು!' ಕಾವೇರಿ ತನ್ನ ಪಾಪದ ಪಿಂಡವನ್ನು ಕಳೆದುಕೊಳ್ಳಲು ಪ್ರಯತ್ನ ಮಾಡಿದಳು. ಅದು ಸಾಧ್ಯವಾಗದೆ ಮತ್ತೆ ಐತಣ್ಣನ ಸಹಾಯದಿಂದ ಊರು ಬಿಟ್ಟು ಬೈಲೂರು ಸೇರಿದಳು. ಅಲ್ಲಿ ಮಗುವನ್ನು ಹಡೆದಳು.

ಕಾವೇರಿ ಹಡೆದ ಸುದ್ದಿ ಹಳ್ಳಿಯವರ ಬಾಯಿಗೆ ವಸ್ತುವಾಯಿತು. ಗಂಡನ ಮನೆಯಲ್ಲಿದ್ದ ತುಂಗಮ್ಮನಿಗಂತೂ ಅದನ್ನು ನಂಬಲಾಗಲಿಲ್ಲ. ಗಂಡ ಸುಬ್ಬಣ್ಣ ಮನೆಯವರಿಗೆ ಮುಖ ತೋರಿಸಲಾರದೆ ಕೊಪ್ಪಕ್ಕೆ ಹೋದ. ತುಂಗಮ್ಮನನ್ನು ಅತ್ತೆ, ಭಾವನ ಹೆಂಡತಿ ರಾಮಿ ಮೊದಲಾದವರು ಪೀಡಿಸಿದರು, ಹೊಡೆದರು. ಬಡಿದರು, ಹಂಗಿಸಿದರು, ಭಂಗಿಸಿದರು. ಅವಳ ನಿರ್ಮಲ ಹೃದಯ ಅದನ್ನು ತಾಳಲಾರದೆ ತವರನ್ನು, ತಾಯಿಯನ್ನು ಹಂಬಲಿಸಿದಳು. ಆವಳು ಹೊಳೆಯಲ್ಲಿ ತೇಲುವ ಹುಲ್ಲುಕಡ್ಡಿಯಂತೆ ಹಾರುತ್ತ ಹಾರುತ್ತ ಮುಂದೆ ಸರಿದಳು. ದಾರಿಯಲ್ಲಿ ಸಿಕ್ಕಿದ ವಿಷ್ಣುಮೂರ್ತಿ ಭಟ್ಟರಿಂದ ಸುದ್ದಿ ಸತ್ಯ ಎಂಬುದನ್ನು ತಿಳಿದು ಮುಂದೆ ಹೋಗಲಿಲ್ಲ. 'ಆ ಕಿರುದಾರಿಯ ಪಕ್ಕದಲ್ಲಿ ದೂಳುತುಂಬಿದ ಹರಕು ವಸ್ತ್ರವನ್ನುಟ್ಟ ಆ ಹೆಣ್ಣು ಮಗಳು ಒಂದು ಮೈಲುಕಲ್ಲಿನಂತೆ ನಿಶ್ಚಲಳಾಗಿ ನಿಸ್ಸಹಾಯಕಳಾಗಿ ಕುಳಿತು ಬಿಟ್ಟಳು.' ಹಾಗೆಯೇ ಹಿಂದಿರುಗಿದಳು. ಕಣ್ತೆರೆದು ನೋಡಿದಾಗ ಸುಬ್ಬಣ್ಣ ತಣ್ಣೀರನ್ನು ಹಣೆಗೆ ತಟ್ಟಿ ಗಾಳಿ ಹಾಕುತ್ತಿದ್ದನು. ತುಂಗಮ್ಮ, 'ನನ್ನ ತವರು ನೀವೇ, ಎಲ್ಲಾ ನೀವೇ' ಎಂದಳು.

ಸುಬ್ಬಣ್ಣ ಹೆಂಡತಿಯೊಡನೆ ಸೀನಣ್ಣ ಗೌರಿಯರ ಸಹಾಯದಿಂದ ಕುಕ್ಕುಂಜಾರು ಹೆಗ್ಡೆಯರ ಬೇಸಾಯ ಮಾಡಿದ. ಸ್ವಲ್ಪದಿನಗಳಲ್ಲಿ ತಮ್ಮ ಗೋವಿಂದನೂ ಇವರನ್ನು ಸೇರಿಕೊಂಡ. 'ಲಕ್ಕಣ್ಣನ ಮನೆಯಲ್ಲಿ ತೂತುಬಿದ್ದ ಗಡಿಗೆ ಮತ್ತೆ ಕೆಲವು ತಿಂಗಳುಗಳಲ್ಲಿ ಮತ್ತೂ ಬಿರಿಬಿಟ್ಟು ದೊಡ್ಡದಾಯಿತು.' ಸುಬ್ಬಣ್ಣ—ತುಂಗಮ್ಮರ ಹೊಸ ಬೇಸಾಯ ತೆನೆತುಂಬಿ, ತಿರಿತುಂಬಿತು. ಇತ್ತ ತುಂಗಮ್ಮನೂ ಬಸಿರು ತುಂಬಿ ಹೆಣ್ಣು ಮಗುವನ್ನು ಹಡೆದಳು. ಗೌರಿ ಅವಳಿಗೆ ತವರುಮನೆಯಾದಳು.

ಕಾವೇರಿ ಬೈಲೂರಲ್ಲಿ ಅಂಗಡಿಯಿಟ್ಟುಕೊಂಡು ಸುಧಾರಿಸಿದಳು. ಹತ್ತು ಜನರಿಗೆ ಬೇಕಾದವಳಾದಳು. 'ಕರೆದಾಗ ಒದಗುವುದು ಕರೆಯದಾಗ ದೂರವಿರುವುದು ಇಂತಹ ಜಾಗರೂಕತೆಯ ಜಾಣತನದಿಂದಾಗಿ ಅವಳು ಯಾವತ್ತೂ ಪರಿಮಳವಾಗಿಯೇ ಉಳಿದಳು' ಹಿಂದೆ ಮಾತನಾಡಿಸದ ಬಂಧುಬಳಗದವರೂ, ಊರಿನವರೂ ಅವಳ ಅಂಗಡಿಯಲ್ಲಿ ಕುಳಿತು ವೀಳ್ಯ ಜಗಿದು ಹೋದರು. 'ಎಲ್ಲ ಬಿಟ್ಟು ಒಮ್ಮೆ ಕೌಡೂರಿನ ಖ್ಯಾತನಾಮ ಪುರೋಹಿತ ವಿಷ್ಣುಮೂರ್ತಿ ಭಟ್ಟರೂ ಒಂದು ದಿನ ಅವರು ಹೇಳುವಂತೆ ದಾರಿ ತಪ್ಪಿ ಅವಳಲ್ಲಿಗೆ ಬಂದು ಹೀ ಹೀ ಹಲ್ಕಿರಿದು, ಏನು ಕಾವೇರಿ; ಚೆನ್ನಾಗಿದ್ದೀಯಾ ವಿಚಾರಿಸಿಕೊಂಡರು!' 'ಮುತ್ತುಕೊಟ್ಟರೂ ಬತ್ತಕ್ಕಿಂತ ಮೇಲು' ಎಂಬಂತಾಯಿತು ಕಾವೇರಿಯ ಸ್ಥಿತಿ. ಆದರೆ ಅವಳಿಗೆ ಮಗಳ ಹಂಬಲ ಹೋಗಲಿಲ್ಲ. 'ಅಯ್ಯೋ ತುಂಗಮ್ಮ! ನಾನು ನಿನ್ನ ಮಗಳಾಗಿ, ನೀನು ನನ್ನ ತಾಯಿಯಾಗಿ ಹೋದಿಯಲ್ಲ' ಎಂದು ಅತ್ತುಬಿಟ್ಟಳು.

ಸುಬ್ಬಣ್ಣನ ಹಿಂದಿನ ಸೇರೆಗಾರರಿಂದಾಗಿ ಗೋವಿಂದ ಗಾಡಿ ಸಾಹುಕಾರನಾದ. ಸೀನಣ್ಣನನ್ನೂ ಪೋಲೀಸರಿಗೆ ಹೇಳಿಸಿ ಹಿಡಿ

ಸಿಬಿಟ್ಟರೆ ಸುಬ್ಬಣ್ಣ–ತುಂಗಮ್ಮಂಗೆ ಆ ಪೆಟ್ಟು ತಗುಲುತ್ತದೆ. ಎಂದು ಲೆಕ್ಕಹಾಕಿ ರಾಮಿ ತನ್ನ ಕಾಲ ಮೇಲೆಯೇ ಕೊಡಲಿ ಹಾಕಿಕೊಂಡಳು. ಮಲಯಾಳಿ ಪೋಲೀಸ್ ಅವಳನ್ನು ಕೆಡಿಸಿದ. ಪೋಲೀಸ್ ಸೀನಣ್ಣನ ಬದಲು ತನ್ನ ಮುದುಕ ಮಾವನನ್ನೇ ಹಿಡಿದು ಜೈಲಿಗೆ ಹಾಕುವಂತಾಯಿತು. ಕಾವೇರಿಯ ಪ್ರಭಾವ ದಿಂದ ಆವನನ್ನು ಬಿಡಿಸುವುದು ಸಾಧ್ಯವಾಯಿತು.ರಾಮಿ ಊರು ಬಿಟ್ಟು ತವರು ಸೇರಿದಳು. ರಾಮಿಯ ಗಂಡ ತಂಕರ ಊರು ಬಿಟ್ಟುಹೋದ. ತುಂಗಮ್ಮನ ಅತ್ತೆ ಮನೆ ಬರಿದಾದುದನ್ನು ಕಂಡು ನೊಂದು ಪಶ್ಚಾತ್ತಾಪದಿಂದ ತುಂಗಮ್ಮ—ಸುಬ್ಬಣ್ಣ—ಗೋವಿಂದರನ್ನು ಕರೆದು ತಂದು ಮನೆತುಂಬಿಸಿದಳು. ಕಾಲ ಕಸ ವಾದ ತಂಕರ ಹಿಂದಿರುಗಿದಾಗ ಪ್ರೀತಿಯಿಂದ ಸ್ವಾಗತಿಸಿದರು. ಕಾವೇರಿ ಮೂರು ವರ್ಷದ ಅನಂತರ ತನ್ನ ಮಗಳನ್ನು ಕಂಡು ಹಿಗ್ಗಿದಳು. ತುಂಗಮ್ಮ ಹೋದ ತವರುಮನೆಯನ್ನು ಪಡೆದಳು. ಎಲ್ಲರಿಗೂ ಚಿನ್ನವಾದಳು.

'ತುಂಗಮ್ಮನ ತವರುಮನೆ' ಶ್ರೀ ವೆಂಕಟರಾಜರ ಕಾದಂಬರಿಗಳಲ್ಲಿ ಹಲವು ದೃಷ್ಟಿಗಳಿಂದ ಶ್ರೇಷ್ಠವಾದುದೆನ್ನಬಹುದು. ಇಲ್ಲಿಯ ತುಂಗಮ್ಮ,ಕಾವೇರಿ, ರಾಮಿ, ಗೌರಿ, ಐತಣ್ಣ, ಸೀನಣ್ಣ, ಸೇರೆಗಾರ, ಕಮ್ತಿ, ವಿಷ್ಣು ಮೂರ್ತಿ ಭಟ್ಟ, ಹೆಬ್ಬಾರ ಪ್ರತಿಯೊಂದು ಊರಿನಲ್ಲಿಯೂ ಕಾಣಸಿಗುತ್ತಾರೆ. ಈ ಕಾದಂಬರಿಯನ್ನು ಹೆಚ್ಚು ಆತ್ಮೀಯವಾಗಿ ಲೇಖಕರು ಹೇಳಿದ್ದಾರೆ. ಈ ಹಳ್ಳಿಯ ಜೀವನ ಕವಿಯ ಹಳ್ಳಿಯ ಜೀವನವೂ ಹೌದು.

೨೩

# ನಾಟಕಗಳು

— ೧ —

'ರಂಗಭೂಮಿ' ಎಂಬುದು ಶ್ರೀ ವೆಂಕಟರಾಜರ ಮೊತ್ತ ಮೊದಲನೆಯ ನಾಟಕ. ಇದು ೧೯೪೧ರಲ್ಲಿ ಪ್ರಕಟಿತವಾಯಿತು. ಇದರ ಮುನ್ನುಡಿಯಲ್ಲಿ ನಾಟಕಕಾರರು ಇದರ ವಸ್ತುವನ್ನು ಕುರಿತು ಹೀಗೆ ಹೇಳಿದ್ದಾರೆ: 'ರಂಗಭೂಮಿ'ಯು ನಾಟಕವಲ್ಲ, ಒಂದು ಪ್ರಕರಣ ಮಾತ್ರ. ಜನರಲ್ಲಿ ಒಂದು ಹೊಸ ಹುರುಪು ಹುಟ್ಟಿ ಅದು ವೈಯುಕ್ತಿಕವಾದ ಅಯೋಗ್ಯತೆಯಿಂದಾಗಿ ಫಲ ಕಾರಿಯಾಗದೆ ವಿನಾಶಕ್ಕೆ ಹೇತುವಾಗುವುದು. ಇದು ಜನತೆಯ ಸಹಜವಾದ ದೌರ್ಬಲ್ಯ. ಆದರಿಂದಾಗಿ ಹಲವು ಸಂಸ್ಥೆಗಳು ಗಳಿಗೆಯೊಂದರಂತೆ ಆವಿರ್ಭವಿಸಿ ಅಂತೆಯೇ ಅಂತರ್ಧಾನವಾಗುತ್ತಿರುವುವು. ಈ ತತ್ತ್ವದ ಸೂಕ್ಷ್ಮ ಪರಿಶೀಲನೆಯೇ 'ರಂಗಭೂಮಿ.'

ನಾಟಕ ಕಲೆಯನ್ನು ಉದ್ಧಾರ ಮಾಡುತ್ತೇನೆಂದು ಹೊರಟ ರಂಗಾಚಾರಿ ಹೆಂಡತಿ ಗೋದಾವರಿಯ ಚಿನ್ನವನ್ನೆಲ್ಲ ಮಾರಿ, ಕೆಲವನ್ನು ನಟಿ ಮಿಸ್. ಮಾಧುರಿಗೆ ವಿನಿಯೋಗಿಸಿ ಅವಳ ಸಂಗದಿಂದಾಗಿ ರೋಗಗ್ರಸ್ತನಾಗುತ್ತಾನೆ. ನಾಟಕದ ನಟರನ್ನು ಒಟ್ಟುಗೂಡಿಸುವುದೂ, ಕಪ್ಪೆಯನ್ನು ತಕ್ಕಡಿಯಲ್ಲಿಡುವುದೂ ಒಂದೇ ಆದುದರಿಂದ ರಂಗಾಚಾರಿಯ ನಾಟಕ ಕಂಪೆನಿ ದಿವಾಳಿಯಾಗುತ್ತದೆ. ಸಾಲದವರೆಲ್ಲ ಮುತ್ತುತ್ತಾರೆ. ನಾಟಕ

ದಲ್ಲಿ ಸಂಭಾಷಣೆಗೆ ಮಹತ್ತ್ವವುಂಟೆಂಬುದನ್ನು ನಾಟಕಕಾರರು ಅರಿತಿದ್ದಾರೆ. "ಸಂಭಾಷಣೆಯು ಮನೋಹರವಾಗಿರುವುದಾದರೆ ದೃಶ್ಯಕಾವ್ಯದ ಮಿಕ್ಕುಳಿದ ಎಲ್ಲಾ ದೋಷಗಳು ಕಡೆಗಂಡು ರೂಪಕವು ದೃಶ್ಯರೂಪೇಣ ಅಲ್ಲವಾದರೂ ಕಾವ್ಯದೃಷ್ಟಿಯಿಂದ ನಿರ್ಭರವಾಗಿ ಬಾಳಬಲ್ಲುದು" ಎಂದು ನಾಟಕಕಾರರು ಮುನ್ನುಡಿಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಇದೊಂದು ಒಳ್ಳೆಯ ವಿಡಂಬನೆ ಎನ್ನುವುದಕ್ಕೆ ಇಲ್ಲಿಯ ಈ ಕೆಳಗಿನ ಸನ್ನಿವೇಶ, ಸಂಭಾಷಣೆಗಳು ಸಾಕ್ಷಿ.

*　　　　*　　　　*

ಏನಾದರೂ ಒಂದು ನೌಕರಿ ನೋಡೋಣಾಂದ್ರೆ ನಮ್ಮಂಥ ಜಡ್ಡು ವೈದಿಕರ ಮಕ್ಕಳಿಗೆ ನೌಕರಿ ಎಲ್ಲಿಂದ ಬರಬೇಕು ಮತ್ತೆ? ಕ಼ಾಲಿ ಕೂಲಿ ಕೆಲಸ ಮಾಡೋಣಾಂದ್ರೆ, ಬ್ರಾಹ್ಮಣಾಂತ ತಲೆ ಚೀಟಿಯೊಂದು ಬೇರೆ!

*　　　　*　　　　*

ಪ್ರೊಪ್ರೈಟರ್ ರಂಗಾಚಾರಿ! ಹಾಗೆಲ್ಲಾ ಹಾಕಿದರೆ ನಮ್ಮವರೆಲ್ಲಾ ಆ ಸೀನಾಚಾರಿ ಮಗ ನಮ್ಮ ರಂಗಣ್ಣ ಅಂತ ಬಹಳ ಸಸಾರ ಮಾಡಿ ಬಿಡ್ತಾರೆ! ಅದಕ್ಕೇನು ಮಾಡೋದು! ಹಾಂ! ಹೊಕ್ಕಿತು! ಹಾಕಬೇಕು ಹೀಗೆ ಆರ್. ಎ. ಚಾರಿ!

ಕಂಪೆನೀಲಿ ಹುಡುಗಿಯರಿದ್ದರೇನೇ ಮಜು! ನಾಲ್ಕು ಕಾಸು ಆಗ್ತದೆ!

*　　　　*　　　　*

ಊರಿಗೆ ಅರಸನಾದರೂ ಹೆಂಡತಿಗೆ ಗುಲಾಮ!

*　　　　*　　　　*

ಹೀಗೆ 'ಸತೀಧರ್ಮ ನಾಟಕ'ವನ್ನು ಅಭಿನಯಿಸುವವರೆಲ್ಲ ಸೂಳೆಗಾರಿಕೆಯಲ್ಲಿ ಅದ್ದಿ ತೆಗೆದವರಾಗಿದ್ದರು ಎಂಬುದನ್ನು ನಾಟಕದಲ್ಲಿ ಮಾರ್ಮಿಕವಾಗಿ ತೋರಿಸಿದ್ದಾರೆ. 'ಹೀರೋ' ಪಾತ್ರ ಮಾಡುವವನು ಕೈಕೊಟ್ಟಾಗ ಪ್ರೊಪ್ರೈಟರ್ ಜವಾನ ನಿಗೇ ಆ ಪಾತ್ರವನ್ನು ಕೊಡಲಿಕ್ಕೂ ಹಿಂಜರಿಯುವುದಿಲ್ಲ. ನಾಟಕರಂಗದ ಒಳಗಿನ ಕಸಮುಸುರೆಯನ್ನೆಲ್ಲ ವಿಡಂಬನಾತ್ಮಕ ವಾಗಿ ಇದರಲ್ಲಿ ಲೇಖಕರು ಒಡಮೂಡಿಸಿದ್ದಾರೆ. ಸಂಕ್ಷೇಪ ವಾಗಿ ಹೇಳುವುದಾದರೆ ಇದೊಂದು ನಾಟಕದ ನಾಟಕ!

— ೨ —

ಎರಡನೆಯದು 'ಕೈಲಾಸದಲ್ಲಿ ಕಮ್ಯುನಿಷ್ಟರು'. ಇದು ೧೯೪೮ರಲ್ಲಿ ಬರೆದು ೧೯೫೭ರಲ್ಲಿ ಪ್ರಕಟವಾಯಿತು. ಇದೂ ವಿಡಂಬನಾತ್ಮಕವಾದ ಪ್ರಹಸನ. "ಎರಡು ವಿರುದ್ಧ ಅತಿರೇಕ ಗಳ ಪರಸ್ಪರ ಸಂಘರ್ಷಣೆ— ಅದರ ಪರಿಣಾಮ ಇದೇ ಇಲ್ಲಿಯ ವಿಚಾರ......... ಅಧಿಕಾರಲಾಲಸೆಯ ಅಹಂಭಾವ— ಸ್ಥಾನ ಗೌರವದ ಅಹಂಭಾವ—ಸ್ವಾರ್ಥಸಮಷ್ಟಿಯ ಅಹಂಭಾವ— ಈ ಅಹಂಕಾರತ್ರಯಗಳ ದುರ್ವಾಸನೆಯು ಕಳೆದು ಸತ್ಯ-ಸೇವೆ ಗಳ ಅರಳುಮಲ್ಲಿಗೆ ಪರಿಮಳಿಸಬೇಕು........ ಅಂತಹ ಸತ್ಯಸೇವೆ ಗಳ ಅಭಾವವೇ ದ್ವೇಷಕ್ಕೆ ಪ್ರಚೋದನೆಕೊಟ್ಟು ಅತೃಪ್ತಿಯ ವಾತಾವರಣವನ್ನು ನಿರ್ಮಿಸುವುದು. ಅದೇ ತಾನೇ ಕಮ್ಯೂ ನಿಸಂ!" ಎಂದು ನಾಟಕಕಾರರು ಮುನ್ನುಡಿಯಲ್ಲಿ ಹೇಳಿದ್ದಾರೆ.

ನಾರದ ತುಂಬುರರು ಭೂಲೋಕದಲ್ಲಿ ಸಂಚರಿಸುತ್ತಿರು ವಾಗ ಸಿಗರೇಟ್ ಪ್ಯಾಕ್, ಇಸ್ಪೇಟ್ ಪಿಡಿ, ಸ್ನೋ, ಪೌಡರ್, ಲಿಪ್‌ಸ್ಟಿಕ್, ಕಮ್ಯುನಿಸಂ ಕರಪತ್ರ, ಕಸೂತಿ ಬಟ್ಟೆ ಮುಂತಾದ ವಸ್ತುಗಳು ಕಾಲೇಜು ಕನ್ಯೆಯರಿಂದ ದೊರೆತು ಅದನ್ನು ಸತ್ಯ

ಲೋಕಕ್ಕೂ, ವೈಕುಂಠಕ್ಕೂ, ಕೈಲಾಸಕ್ಕೂ, ದೇವಲೋಕಕ್ಕೂ ತೆಗೆದುಕೊಂಡು ಹೋಗಿ ತ್ರಿಮೂರ್ತಿಗಳೂ ಅವರ ಪತ್ನಿಯರೂ ಆದಿಯಾಗಿ ಸಮಸ್ತ ದೇವತೆಗಳೂ ಅವುಗಳಿಗೆ ಮಾರುಹೋಗುವಂತೆ ಮಾಡುತ್ತಾರೆ. ದೇವತೆಗಳ ಸೇವಕರೆಲ್ಲ ಟ್ರೇಡ್ ಯೂನಿಯನ್ ಸ್ಥಾಪಿಸಿ ಸತ್ಯಾಗ್ರಹ ಮಾಡುತ್ತಾರೆ. ದೇವತೆಗಳೆಲ್ಲ ಏನು ಮಾಡುವುದೆಂದು ತೋರದೆ ಕಂಗಾಲಾಗುತ್ತಾರೆ. ಅಧರ್ಮದ ದಿಗ್ವಿಜಯವಾಗುತ್ತದೆ, 'ಸುಖದ ವೃಥಾನುಸರಣೆಯು ಯಾವ ಮಹದ್ವ್ಯಕ್ತಿಗಾದರೂ ಕೊನೆಗೆ ದುಃಖಕ್ಕೇ ಕಾರಣವಾಗುವುದು' ಎಂದು ಮನಗಂಡು ನಾರದ ಭೂಲೋಕದ ಆ ವಸ್ತುಗಳನ್ನೆಲ್ಲ ಹಿಂದಕ್ಕೆ ತೆಗೆದುಕೊಳ್ಳುವನು. ನಾಟಕದ ಅಂತ್ಯದಲ್ಲಿ ವಿಷ್ಣುವಿನ ಕಾಲಿಗೆ ಬಾಣನಾಟಿದುದನ್ನೂ, ಅವನ ಎದೆಯಲ್ಲಿ ಕಾಲಕೂಟವೇ ಕುದಿಯುತ್ತಿರುವುದನ್ನೂ, ಅವನು ತಲೆಯ ಮೇಲೆ ತನ್ನ ಮೃತ್ಯುವನ್ನು ತಾನೇ ಹೊತ್ತು ನಗುನಗುತ್ತ ಶಿಲುಬೆಯೇರಿದುದನ್ನೂ, ಮೂರು ಗುಂಡು ತಾಗಿ ಸತ್ಯ ಸೇವೆ, ಸಂಯಮಗಳ ಸ್ವರ್ಣಶಿಖರ ಕೆಡೆದುದನ್ನೂ ನಾರದ ನೋಡುತ್ತಾನೆ.

ಇದೊಂದು ಪೌರಾಣಿಕ ಸಾಮಾಜಿಕಗಳ ಕಲಸುಮೇಲೋಗರವೆಂದು ನಾಟಕಕಾರರು ನಿವೇದಿಸಿಕೊಂಡಿದ್ದಾರೆ. ಮಾನವರು ಇಂದು ಸುರ, ಅಸುರರನ್ನು ಮೀರಿದ ಅತಿಮಾನವರು ಎಂಬುದನ್ನು ಇಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಆಟಂಬಾಂಬ್, ಹೈಡ್ರೋಜನ್ ಬಾಂಬ್‌ಗಳ ಎದುರು ಶಿವನ ಮೂರನೆಯ ಕಣ್ಣು ತಣ್ಣಗಾಯಿತು ಎಂಬುದನ್ನು ಒಂದುಕಡೆ ಹೇಳಿದ್ದಾರೆ. ಭೂಮಿಯ ಅಪ್ಸರೆಯರು ದೇವಾಪ್ಸರೆಯರನ್ನು ಮೀರಿ ಭೂಮಿ ಸ್ವರ್ಗವಾಗಿದೆ ಎಂಬುದನ್ನು ಹೇಳಿದೆ. ತ್ರಿಪುರದಹನಕ್ಕೆ ಈಶ್ವರ ಅಷ್ಟೆಲ್ಲ ಕಷ್ಟಪಡಬೇಕಾಗಿಲ್ಲ. ಆ ಮಹಾ

ಮಂತ್ರಾಸ್ತ್ರ 'ಸತ್ಯಾಗ್ರಹ'. ಹೀಗೆ ಅತಿಮಾನವರ ಅಧರ್ಮದ ದಿಗ್ವಿಜಯದಿಂದಾಗಿ ದೇವತೆಗಳು ಕೈಕಟ್ಟಿ ಕುಳಿತುಕೊಳ್ಳು ವಂತಾಗಿದೆ. ವಿಷ್ಣು ಯಾವ ಅವತಾರ ಎತ್ತಬೇಕು ಎಂದು ಯೋಚಿಸುವಂತಾಗಿದೆ ಎಂದು ಈ ನಾಟಕದಲ್ಲಿ ನಾಟಕಕರ್ತೃ ಧ್ವನಿಸಿದ್ದಾರೆ.

— ೩ —

ಮೂರನೆಯುದು 'ಅಮೃತಲಹರಿ' ಎಂಬ ಗೀತರೂಪಕ ಸಮುಚ್ಚಯ. ಇದರಲ್ಲಿ ಐದು ಗೀತರೂಪಕಗಳಿವೆ. ಇದು ೧೯೫೭ರಲ್ಲಿ ಪ್ರಕಟಿತವಾಯಿತು. "ಪುರಾಣದ ಐದು ಘಟನೆ ಗಳನ್ನು ಈ ಐದು ರೂಪಕಗಳಲ್ಲಿ ಬಳಸಿಕೊಂಡುದಾಗಿದೆ. ಆದರೆ 'ಕಲ್ಯಾಣರೇಖೆ'ಯು ಜೈನ ಪುರಾಣಗಳಿಗನುಸಾರವಾಗಿರುವು ದರಿಂದ ಇದರ ರಾವಣನು ರಾಕ್ಷಸನಾಗಿರದೆ ಧರ್ಮಪರಾಯಣ ನಾದ ಸಜ್ಜನನಾಗಿರುವನು. ಆದುದರಿಂದ ಪತಿಯ ವಾಕ್ಯೋ ಲ್ಲಂಘನೆಗಾಗಿ ಸೀತೆಯು ತಾನೇ ಪ್ರಾಯಶ್ಚಿತ್ತವನ್ನು ರಾವಣನ ಮುಖಾಂತರ ಹೊಂದುವಳು. ರಾವಣನು ಸೀತೆಯ ಯೋಗ್ಯತೆ ಯನ್ನು ತಿಳಿದೂ ತನ್ನ ಕರ್ತವ್ಯತಾಭಾವದಿಂದಾಗಿ ನ್ಯಾಯ ನಿಷ್ಠುರನಾಗಿ ವರ್ತಿಸುವನು. ಇದನ್ನು ರಾಮನು ತಿಳಿಯದೆ ಇರುವುದರಿಂದ ರಾವಣನು ಸಾಯಬೇಕಾಗುವುದು" ಎಂದು ಲೇಖಕರು ಮುನ್ನುಡಿಯಲ್ಲಿ ಪ್ರಸ್ತಾವಿಸಿದ್ದಾರೆ. ಸ್ವರ್ಣಹರಿಣ ಸುಳಿದುದು ಸೀತೆಗೆ ಹೀಗೆ ಕಾಣಿಸುತ್ತದೆ:

ನೀವೆ ಕಾರುಣ್ಯದಲಿ ನನ್ನ ಸಂತಸಕಾಗಿ
ಕೊಡುವ ಬಳುವಳಿಗಾಗಿ ಬಂದುದೆಂಬೆ!

ಅದನ್ನು ತಂದು ತನ್ನ ಬಯಕೆಯನ್ನು ನೆರವೇರಿಸಬೇಕೆಂದು ಸೀತೆ ರಾಮನನ್ನು ಒತ್ತಾಯಿಸುತ್ತಾಳೆ:

ನನ್ನಾಸೆಯುಮರತೆಗೆ ನಿತ್ಯನೀರನು ಹೊಯ್ದು
ಹೂವಕೊಳುವವರು ನೀವಲ್ಲವೇನು?

ರಾಮು ಆದಕ್ಕೆ ಕಲ್ಯಾಣರೇಖೆ ಹಾಕಿ ಅದರ ಹೊರಗೆ ಬಾರದಿರು ಎನ್ನುವನು:

ಈ ಗೆರೆಯು ದಾಂಟದಿರು. ಮಾನವತಿಯರ ಕಾವ
ಇದು ರಾಮುನಾಮು ಕಲ್ಯಾಣರೇಖೆ!

ಸೀತೆಯನ್ನು ಕಂಡು ರಾವಣ ಹೀಗೆ ಹೇಳುತ್ತಾನೆ:

ಈ ಪುಣ್ಯ ಭೂಮಿಕೆಯು ಪಾವನೋದಯವಾಗಿ
ಕಾಡೆ ಸನ್ವೈಭವದ ಸದನವಾಯ್ತು!
ಈ ಧರ್ಮವೇದಿಕೆಯನುಳಿದಯೋಧ್ಯಾನಗರಿ
ಬರಗೊಂಡ ಮಾನವ್ಯದಡವಿಯಾಯ್ತು!

ಅದೇ ಜಿಂಕೆ ಸುಡುವ ಬೆಂಕಿಯಾಯಿತು ಸೀತೆಯ ಸೌಭಾಗ್ಯಕೆ.
'ತಪೋಭಂಗ' ಎಂಬ ಎರಡನೆಯ ರೂಪಕ ವಿಶ್ವಾಮಿತ್ರ ಮೇನಕೆಯ ಮಿಲನದ ಸನ್ನಿವೇಶವನ್ನು ಕುರಿತುದಾಗಿದೆ.

ಸೊಗಸಿನ ಮೇನಕೆ ಮುಮುತೆಯ ತೂಗುತೆ
ಮೈ ಹೂವಾಗುತೆ ನಡೆತರಲಿ

ಎಂದು ಧರ್ಮಪುರುಷ ಅಪ್ಪಣೆ ಕೊಡುತ್ತಾನೆ.

ಮಾವಿನ ಸಿಹಿಯಲಿ ಬೇವಿನ ಕಹಿಯಲಿ
ಪರಿಮಳದೊಂದೆ ಹೊರೆ

ಆಗ ಮೇನಕೆ ಬರುತ್ತಾಳೆ; ಬಂದು ಕಾಣುತ್ತಾಳೆ:

ಬುವಿ ಬಾನ್ ಮುಗಿಲು ಹೊತ್ತಿದೆ ಸಾಲು
ಸಾಲಿನ ಸೊಗಸಿನ ಸಂಭಾರ!

ವಿಶ್ವಾಮಿತ್ರನಿಗೆ ಅವಳು 'ಈ ರಾಗದ ಹೊಸ ಸಂಕಲಿ, ಇದು ಮೋಹದ ಮಿದುಗಾಳ!'ವಾಗಿ ತನಗೊಡ್ಡಿದುದು ಎಂದು ಗೊತ್ತಾಗುತ್ತದೆ. ಮೇನಕೆ "ಗೆಲುವೊಳಕೆಯನು ಚಿವುಟ ಕೊಲಬಾರದಯ್ಯ ನಿಮ್ಮಪರಿಮಿತ ಪುಣ್ಯಕೀ ಜೀವದಾನ!" ಎಂದು ತನ್ನನ್ನು ತಾನೇ ಅವನ ಮುಂದೆ ಚೆಲ್ಲಿಕೊಳ್ಳುತ್ತಾಳೆ.

'ತಪೋಭಂಗ' ವಿಶ್ವಾಮಿತ್ರ ಮೇನಕೆಯರ ಮಿಲನ ವಾದರೆ, 'ಮಿಲನ ರಾತ್ರಿ' ಚಂದ್ರ—ತಾರೆಯರ ಸಮ್ಮಿಲನ.

'ಮೋಡ ಮೋಡಗಳೆಡೆಯ ಸೂಳಿಲಿ ಚಿಗಿದ ಮಿಂಚಿನ ತೋರಣ', 'ಎಸಳ ತುಟಿಯಲಿ ಭಾಸಣಿಸಿ ರಸ ಬೆಸೆವ ಗಂಧ ಸಮೀರಣ', 'ದೂರ ದೇಶದ ನಲ್ಲನೆದೆಯಲಿ ಕಾಮನೂರಿದ ಹೂಗಣೆ'ಯಾಗಿ ಶ್ರಾವಣ ಬರುವುದು.

ಹರೆಯವೊಂದು ತುಂಬುಗೊಡದ
ಹಾಲಿನಂಥ ಜೀವಾಳ
ಅದನು ಕಡೆದು ಸೊದೆಯನುಣ್ಣ–
ದಿರಲದು ಹಾಲಾಹಲ|
ಬಿಗಿದ ತಂತಿ ಭವ್ಯನಾದ–
ಕಾಗಿ ಕಾಯಬೇಕೆ?
ಬೆರಳ ಸೋಂಕಿನೊಂದು ಮಿಡಿತ–
ವಿನ್ನು ಬಾರದೇಕೆ?

ಮುದುಕ ಬೃಹಸ್ಪತಿಯ ಮಡದಿ ತಾರೆಯ ಅತೃಪ್ತ ಕಾಮ ಸೋಮನ ಶೃಂಗಾರವನ್ನು ಬಯಸಿತು. ಅವನನ್ನು ತನ್ನ ಬಳಿಗೆ ಆಹ್ವಾನಿಸಿದಳು:

ಯಾರು ಮೂಸದಿರುವ ಪ್ರಣಯ ಪಾರಿಜಾತ
ನಿನ್ನ ಪೂಜೆಗೆಂದು ಕೂಡುತಿರುವೆನು

ಯಾರು ಸವಿಯದಿರುವ ಹೆಣ್ಣುತನದ ಹಣ್ಣು
ನಿನಗೆ ಮೀಸಲೆಂದು ಸೀಡುತಿರುವೆನು.

ಶ್ರಾವಣದ ಸಂಗೀತವಾಗಿ ಸೋಮ ಬರುತ್ತಾನೆ. ತಾರೆ ತನ್ನ ಸೌಂದರ್ಯ ಸಾಕೆ ಎಂದು ಸಂದೇಹ ಪಡುವಂತಾಗುತ್ತದೆ.

ನಾಲ್ಕನೆಯದು 'ಮಂಗಲಗೌರಿ'. ಇದರಲ್ಲಿ ಪಾರ್ವತಿ ತನ್ನ ಸಖಿಯರೊಂದಿಗೆ ಶಿವನನ್ನು ಪೂಜಿಸಿ ಸಾಕ್ಷಾತ್ಕಾರ ಪಡೆಯುವ ಸನ್ನಿವೇಶ ವರ್ಣಿತವಾಗಿದೆ. ಶಿವ ತಾಪಸವೇಷದಿಂದ ಗೌರಿಯನ್ನು ಕಂಡು,

ಈ ಹುಬ್ಬಿನೆಡೆಗಳಲಿ ಸುಳಿವ ಕಣ್ಣಿನ ಬಾಣ
ಗೆಲದಿರುವ ಗುರಿಯಾವುದುಂಟು!

ಎಂಬಂತಾಗುತ್ತದೆ.

ಶಿವನ ಮಸಣದ ಬಾಳು ಗೌರಿಯನುರಾಗದಲಿ
ಸೆಲೆಗೊಂಡ ಶೃಂಗಾರ ಶರಣವಾಯ್ತು!

'ದಿವ್ಯದರ್ಶನ' ಎಂಬ ಕೊನೆಯ ಗೀತರೂಪಕದಲ್ಲಿ ಗೋಪಕನ್ಯೆಯರು, ರಾಧಾ, ಕೃಷ್ಣ, ಚಂದ್ರಾವಳಿಯರ ಸಮಾಗಮದ ಸನ್ನಿವೇಶವಿದೆ. ಕೃಷ್ಣ, ರಾಧೆ- ಚಂದ್ರಾವಳಿಯರಿಬ್ಬರನ್ನೂ ಒಲಿಯುತ್ತಾನೆ. ಗೋಪ ಕನ್ಯೆಯರ ಸ್ತುತಿಯಿಂದ ರೂಪಕ ಮುಗಿಯುತ್ತದೆ:

ವೃಂದಾವನದಲಿ ನಿಂದಿಹ ಹರಿಗೋ–
ವಿಂದನ ಕಂಡಿಹಿರ?
ಮಂದಾರದ ಮೃದುಹಾಸದ ಮಧುಮಾ–
ರಂದನ ಕಂಡಿಹಿರ?

* * *

ಲೋಕದ ಕಣ್ಣೆವೆ ತೆರೆಯಿತು! ಕಂಡಿತು
ನಾಕದ ಪರಿವಾರ
ಈ ಕಡೆಯುರಳಿತು ಗೋಪಾಂಗನೆಯರ
ಪ್ರೀತಿಯು ಮಂದಾರ

* * *

ಸಂತೋಷವೆ ಮೈದುಂಬಿತು ಧಿಮಿತಕೆ
ಕುಣಿಯಿತು ಶೃಂಗಾರ
ಚಿಂತೆಯು ಚಿತೆಯಾರಿತು ತಲೆದೋರಿತು
ಭಕ್ತಿಯು ಸಂಚಾರ!

೬

## ಉಪಸಂಹಾರ

ಶ್ರೀ ಸಾಂತ್ಯಾರು ವೆಂಕಟರಾಜರ ಸಾಹಿತ್ಯ ಸೃಷ್ಟಿ ವೈವಿಧ್ಯಮಯವಾಗಿದೆ. ಅವರ ಶ್ರೇಷ್ಠಕೃತಿ 'ಕಾವ್ಯಮನೋರಮಾ'. ಇದು ಕನ್ನಡದ ಕವಿಯೊಬ್ಬ, ಸಂಸ್ಕೃತ ಸಾಹಿತ್ಯಕ್ಕೆ ಕೊಟ್ಟ ಬೆಲೆಬಾಳುವ ಕಾಣಿಕೆ. ಮುಂದಿನ ಅವರ ಅರವತ್ತು ಕವನಗಳ ಸಂಕಲನ ಅವರ ಶ್ರೇಷ್ಠ ಕನ್ನಡ ಕೃತಿಯಾಗಲಿರುವುದೆಂದು ಅವರು ನಂಬಿದ್ದಾರೆ.

ಶ್ರೀ ವೆಂಕಟರಾಜರನ್ನು ನಾನು ಎಲ್ಲ ಸಾಹಿತಿಗಳನ್ನು ಕೇಳುವ ಹಾಗೆ 'ನಿಮ್ಮ ಜೀವನ ದರ್ಶನವೇನು' ಎಂದು ಕೇಳಿದೆ; ಅವರು ಅದಕ್ಕೆ ಯೋಚನೆ ಮಾಡದೆ 'ನಾನು ಮಾಡುವುದು. ಇತರರನ್ನು ಮಾಡಲು ಬಿಡುವುದು'' ಎಂದು ಸೂಚ್ಯವಾಗಿ ಹೇಳಿದರು. ಇಂದಿನ ಸಾಹಿತಿಗಳಲ್ಲಿರುವ ಗುಂಪುಗುಳಿತನ, ರಾಜಕೀಯ, ಮತ್ಸರಗಳನ್ನು ಕಂಡು ಅವರು ತುಂಬ ನೊಂದಿದ್ದಾರೆ. ಕಸ ಕೊಚ್ಚಿ ಹೋಗುತ್ತದೆ; ರಸ ಉಳಿಯುತ್ತದೆ. ಅದಕ್ಕೇಕೆ ಮತ್ಸರ ಪಡಬೇಕು ಎನ್ನುತ್ತಾರೆ.

## ಅನುಬಂಧ

# ಶ್ರೀ ಎಸ್. ವೆಂಕಟರಾಜರ ಕೃತಿಗಳು

### ಕವನ ಸಂಕಲನಗಳು

೧. ಕವಿತಾಕಾಮಿನಿ : ಭಾಗ ೧.

೨. ಕವಿತಾಕಾಮಿನಿ : ಭಾಗ ೨.

೩. ಮಾನಸಗಂಗೆ.

೪. ಕಾವ್ಯಮನೋರಮಾ.

೫. ಪದ್ಮಸರೋವರ.

೬. ಮಾನಸಪುಷ್ಪ.

### ಸಣ್ಣ ಕತೆಗಳ ಸಂಕಲನಗಳು

೭. ಆಕಾಶಗಂಗೆ.

೮. ಸಪ್ತಸಾಗರ.

### ಕಾದಂಬರಿಗಳು

೯. ಅಂಬುಜಾಕ್ಷಿ.

೧೦. ಧರ್ಮಶಾಲೆ.

೧೧. ತುಂಗಮ್ಮನ ತವರುಮನೆ.

### ನಾಟಕಗಳು

೧೨. ರಂಗಭೂಮಿ.

೧೩. ಕೈಲಾಸದಲ್ಲಿ ಕಮ್ಯುನಿಷ್ಟರು.

೧೪. ಅಮೃತ ಲಹರಿ.

# ನವೋದಯ
# ಪ್ರಚಾರ ಪುಸ್ತಕ ಮಾಲೆ

**ಅಚ್ಚಾದುವು:**

ಕಲಾವಿದ ಕೃಷ್ಣ ಹೆಬ್ಬಾರರು
ಬೇಂದ್ರೆ
ಕಾರ್ಲ್ ಮಾರ್ಕ್ಸ್
ಶಿವರಾಮ ಕಾರಂತ
ಶ್ರೀ ಪು. ತಿ. ನರಸಿಂಹಾಚಾರ್ಯರು
ಟಿ. ಎಸ್. ಈಲಿಯಟ್
ಮಾಸ್ತಿ ವೆಂಕಟೇಶ ಅಯ್ಯಂಗಾರ್
ಕಡೆಂಗೋಡ್ಲು ಶಂಕರ ಭಟ್ಟರು
ಶ್ರೀರಂಗ
ಅ. ನ. ಕೃಷ್ಣರಾಯರು
ಬದುಕುವ ದಾರಿ
ಶ್ರೀ ಕೃಷ್ಣ ದೌತ್ಯ
ಶ್ರೀ ಪುರಂದರ ದಾಸರು
ಸೇಡಿಯಾಪು ಕೃಷ್ಣ ಭಟ್ಟರು
ಮುದ್ದಣ
ಗೋವಿಂದ ಪೈ ಕಾವ್ಯಗಳು
ವಿ. ಸೀ.
ಹುರುಳಿ ಭೀಮರಾಯರು

**ಅಚ್ಚಿನಲ್ಲಿ:**

ಉಗ್ರಾಣ ಮಂಗೇಶರಾಯರು
ಕನ್ನಡ ಕಟ್ಟಿದವರು
ಮುಳಿಯ ತಿಮ್ಮಪ್ಪಯ್ಯ
ಎಸ್. ವೆಂಕಟರಾಜ
ಪಂಜೆ ಮಂಗೇಶರಾಯರು
ಕೈಯಾರ ಕಿಞ್ಞಣ್ಣ ರೈ

---

ನವಯುಗ ಪ್ರೆಸ್, ಉಡುಪಿ.